ಶ್ರೀ

ಕೀರ್ತನಕಂಠಾಭರಣ — ಐದನೆಯ ಭಾಗ

# ಕೆಲವು ಸತ್ಪುರುಷರ ಕಥೆಗಳು

ಲೇಖಕ

ಹೊಸಕೆರೆ ಚಿದಂಬರಯ್ಯ

ಭಕ್ತಬಂಧುಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ

ಪ್ರಕಾಶಕ

ಮುಂಚಲದೊರೆ ರಾಮರಾವ್

ಎಸ್. ಎಸ್. ಎನ್. ಬುಕ್ ಡಿಪೊ, ಬಸವನಗುಡಿ, ಬೆಂಗಳೂರು ಸಿಟಿ

ಮೊದಲನೆ ಮುದ್ರಣ ೧,೦೦೦ ಪ್ರತಿಗಳು

ಬಿ. ಬಿ. ಡಿ. ಪವರ್ ಪ್ರೆಸ್,

ಅರಳೇಪೇಟೆ, - - - - ಬೆಂಗಳೂರು ಸಿಟಿ

ಶಾ. ಶ. ೧೮೫೩] ಬೆಲೆ ೧ ರೂ. [ಕ್ರಿ. ಶ. ೧೯೩೧

# ವಿಷಯಕ್ರಮ

ಶ್ರೀ

ಕೀರ್ತನಕಂಠಾಭರಣ — ಐದನೆಯ ಭಾಗ

# ಕೆಲವು ಸತ್ಪುರುಷರ ಕಥೆಗಳು

ಲೇಖಕ

ಹೊಸಕೆರೆ ಚಿದಂಬರಯ್ಯ

ಭಕ್ತಬಂಧುಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ

ಪ್ರಕಾಶಕ

ಮಂಚಲದೊರೆ ರಾಮರಾವ್

ಎಸ್. ಎಸ್. ಎನ್. ಬುಕ್ ಡಿಪೊ, ಬಸವನಗುಡಿ, ಬೆಂಗಳೂರು ಸಿಟಿ

ಮೊದಲನೆ ಮುದ್ರಣ ೧,೦೦೦ ಪ್ರತಿಗಳು

ಬಿ. ಬಿ. ಡಿ. ಪವರ್ ಪ್ರೆಸ್,

ಅರಳೇಪೇಟೆ, - - - - ಬೆಂಗಳೂರು ಸಿಟಿ

ಶಾ. ಶ. ೧೮೫೩] ಬೆಲೆ ೧ ರೂ. [ಕ್ರಿ. ಶ. ೧೯೩೧

# ಮುನ್ನುಡಿ

ಒಂದು ಮಂಡಲ (೪೮ ದಿವಸ) ಬೇರೆ ಬೇರೆ ಕಥೆಗಳನ್ನು ಪ್ರಶಸ್ತವಾದ ರೀತಿಯಲ್ಲಿ ಮಾಡುವುದಕ್ಕೆ ಅನುಕೂಲಗೊಳಿಸಬೇಕೆಂದು ನಾನು ಉದ್ದೇಶಮಾಡಿದ್ದ ೪೮ ಕಥೆಗಳೂ ಈ ರೀತಿಯಲ್ಲಿ ದೇವರ ಕೃಪೆಯಿಂದ ಪೂರ್ಣವಾದದ್ದಕ್ಕೆ ಸಂತೋಷವನ್ನು ಹೊರಪಡಿಸುವುದರ ಹೊರತು ಇಲ್ಲಿ ಇದರ ಹಿಂದಿನ ಭಾಗಗಳಲ್ಲಿ ಬರೆದಿರುವ ಮುನ್ನುಡಿಗಿಂತ ಹೆಚ್ಚಿಗೆ ಹೇಳಬೇಕಾದ್ದೇನೂ ಇಲ್ಲ. ಹಾಡುಗಳ ರಾಗತಾಲಗಳನ್ನು ಗೊತ್ತು ಮಾಡುವ ವಿಷಯದಲ್ಲಿ ಶ್ರೀಯುತ ಸೂಲಕುಂಟೆ ಹನುಮಂತರಾಯರ ನೆರವನ್ನು ಮೊದಲಿಂದ ಕೊನೆಯವರೆಗೂ ಉಪಯೋಗಮಾಡಿಕೊಂಡು ಅವರ ಉಪಕಾರಕ್ಕೆ ಕೃತಜ್ಞನಾಗಿದ್ದೇನೆ. ಅನೇಕಬಗೆಯ ಹೂಗಳಿಂದ ಭ್ರಮರವು ರಸವನ್ನು ತಂದು ಕೂಡಿಟ್ಟು ಮಧುವನ್ನು ಮಾಡಿರುವಂತೆ ಅನೇಕಕವಿಗಳ ಅನೇಕಗ್ರಂಥಗಳಿಂದ ರಸವತ್ತಾದ ಅಭಿಪ್ರಾಯಗಳುಳ್ಳ ಪದ್ಯಗಳನ್ನು ಸಂಗ್ರಹಿಸಿ ಸವಿಕಟ್ಟಾಗಿ ಮಾಡಿರುವ ಈ ನನ್ನ ಭಾಷಾಸೇವೆಯನ್ನು ಕೀರ್ತನಕಾರರೂ ವಾಚಕರೂ ಸಾರ್ಥಕಗೊಳಿಸಿ ಪ್ರೋತ್ಸಾಹಿಸಬೇಕೆಂದು ಸೆರಗೊಡ್ಡಿ ಬೇಡುತ್ತೇನೆ.

ಬೆಂಗಳೂರು,
ಪ್ರಜೋತ್ಪತ್ತಿ-ಮಾರ್ಗಶಿರ ಶು| ೧೧.

ಹೊಸಕೆರೆ ಚಿದಂಬರಯ್ಯ.

## ಸಂಜ್ಞೆಗಳ ವಿವರಣೆ

### ಸಾಲುಗಳ ಮೊದಲಲ್ಲಿ ಉಪಯೋಗಿಸಿರುವವು

| | | | | | |
|---|---|---|---|---|---|
| ಅ | ಅರ್ಥ | ದಿಂ | ದಿಂಡಿ | ವೃ | ವೃತ್ತ |
| ಉ | ಉಗಾಭಾಗ | ದ್ವಿ | ದ್ವಿಪದಿ | ಶ | ಶರಷಟ್ಪದಿ |
| ಕಂ | ಕಂದ | ಭಾ.ಷ | ಭಾಮಿನೀಷಟ್ಪದಿ | ಶ್ರು | ಶ್ರುತಿ |
| ಕೀ | ಕೀರ್ತನಕಾರರ ಅರಾ. | ಭಾ | ಭಾಮಿನೀಷಟ್ಪದಿ | ಶ್ಲೋ | ಶ್ಲೋಕ |
| ಕು | ಕುಸುಮಷಟ್ಪದಿ | ಭೋ | ಭೋಗಷಟ್ಪದಿ | ಸಾ | ಸಾಕಿ |
| ಚೂ | ಚೂರ್ಣಿಕೆ | ರ | ರಗಳೆ | ಸಾಂ | ಸಾಂಗತ್ಯ |
| ಚೌ | ಚೌಪದಿ | ಲ. ರ | ಲಲಿತರಗಳೆ | ಸೀ | ಸೀಸಪದ್ಯ |
| ಟಿ | ಟಿಪ್ಪಣಿ | ವ | ವಚನ | ಸೂ | ಸೂತ್ರ |
| ತ್ರಿ | ತ್ರಿಪದಿ | | | | |

# ಸಾಲುಗಳ ಕೊನೆಯಲ್ಲಿ ಉಪಯೋಗಿಸಿರುವವು

| | |
|---|---|
| ಅ. ಗೀ | ಅಧ್ಯಾತ್ಮಗೀತಾವಳಿ |
| ಅ. ರಾ. ನಾ | ಅನರ್ಘರಾಘವನಾಟಕ |
| ಅ. ಶ | ಅಪರಾಜಿತೇಶ್ವರಶತಕ |
| ಆ. ಬೋ | ಆತ್ಮಬೋಧೆ |
| ಆ. ವಿ. ವಿ | ಆತ್ಮವಿದ್ಯಾವಿಲಾಸ |
| ಉ. ರಾ. ಚ | ಉತ್ತರರಾಮಚರಿತ್ರೆ |
| ಐ. ಶ | ಐಘುರೀಶ್ವರಶತಕ |
| ಕ. ದಾ. ಚ | ಕನಕದಾಸರ ಚರಿತ್ರೆ |
| ಕ. ನಾ | ಕನಕದಾಸನಾಟಕ |
| ಕ. ಮ. ಆ | ಕನಕಮಹಿಮಾದರ್ಶ |
| ಕ. ಭಾಗ | ಕನ್ನಡ ಭಾಗವತ |
| ಕ. ಭಾರ | ಕನ್ನಡ ಭಾರತ |
| ಕ. ಗೀ | ಕಪಿಲಗೀತೆ |
| ಕ. ಸಂ. ನಾ / ಕ. ಸಂ. | ಕಲಿಸಂತರಣನಾಟಕ |
| ಕೀ. ತ | ಕೀರ್ತನತರಂಗಿಣಿ |
| ಕೈ. ಕ | ಕೈವಲ್ಯಕಲ್ಪವಲ್ಲರಿ |
| ಕೌ. ಪಂ. ಸ್ತೋ | ಕೌಪೀನಪಂಚಕಸ್ತೋತ್ರ |
| ಗೀ. ಗೋ | ಗೀತಗೋಪಾಲ |
| ಗು. ಅ | ಗುರ್ವಷ್ಟಕ |
| ಗು. ಗೀ | ಗುರುಗೀತೆ |
| ಗು. ಭ. ಸಾ | ಗುರುಭಕ್ತಿಸಾರ |
| ಗು. ಶಂ. ಶ / ಶಂ. ಶ | ಗುರುಮೂರ್ತಿಶಂಕರಶತಕ |
| ಗು. ಸ್ತು. ಸು | ಗುರುಸ್ತುತಿಸುಮಾಂಜಲಿ |
| ಛಾಂ | ಛಾಂದೋಗ್ಯ |
| ಜಿ. ಸ್ತು | ಜಿನಸ್ತುತಿ |
| ಜೀ. ಸಂ | ಜೀವಸಂಬೋಧನೆ |
| ದಾ | ದಾಸರ ಪದಗಳು |
| ಧ. ಅ. | ಧರ್ಮಾಮೃತ |
| ನ. ಶ. | ನಯಶತಕ |
| ನಾ. ತ್ರಿ. | ನಾಗಿದೇವತ್ರಿವಿಧಿ |
| ನಾ. ಭ. ಸೂ | ನಾರದಭಕ್ತಿಸೂತ್ರ |
| ಪ್ರ. ಚಂ | ಪ್ರಬೋಧಚಂದ್ರೋದಯ |
| ಪು. ಚ | ಪುಷ್ಪೋದ್ಭವಚರಿತೆ |
| ಭಕ್ತಿ. ಗೀ | ಭಕ್ತಿಗೀತಾವಳಿ |
| ಭಕ್ತಿ. ದೀ | ಭಕ್ತಿದೀಪಿಕೆ |
| ಭ. ಗೀ | ಭಗವದ್ಗೀತೆ |
| ಭ. ನೀ | ಭರ್ತೃಹರಿ ನೀತಿಶತಕ |
| ಭ. ವೈ | ಭರ್ತೃಹರಿ ವೈರಾಗ್ಯಶತಕ |
| ಮ. ಉ | ಮನಸ್ಸಿಗುಪದೇಶ |
| ಮು. ಮಾ | ಮುಕುಂದಮಾಲೆ |
| ಮುಂ | ಮುಂಡಕ |
| ಮೋ. ತ. | ಮೋಹನತರಂಗಿಣಿ |
| ಮೋ. ಮು | ಮೋಹಮುದ್ಗರ |
| ಯ. ಚ | ಯಶೋಧರಚರಿತೆ |
| ಯೋ. ಸೂ | ಯೋಗಸೂತ್ರಗಳು |
| ರ. ಶ. | ರತ್ನಾಕರಾಧೀಶ್ವರಶತಕ |
| ರಾ. ವ. ಅ | ರಾಮಕೃಷ್ಣವಚನಾಮೃತ |
| ಲ. ಸ. ಸ್ತೋ | ಲಲಿತಾಸಹಸ್ರನಾಮಸ್ತೋತ್ರ |
| ವಿ. ಕಾ | ವಿದ್ಯಾರಣ್ಯಕಾವ್ಯ |
| ವಿ. ಶ | ವಿರೂಪಾಕ್ಷಶತಕ |
| ವೀ. ವ. ಶಾ / ವೀ. ವ | ವೀರಶೈವವಚನಶಾಸ್ತ್ರ |
| ಶ. ಶ್ಲೋ | ಶತಶ್ಲೋಕೀ |
| ಶಿ. ಯೋ. ಭೂ | ಶಿವಯೋಗಭೂಷಣ |
| ಶ್ವೇ. | ಶ್ವೇತಾಶ್ವತರ |
| ಶ್ರೀ. ಅ | ಶ್ರೀಪದಾಶೀತಿ |
| ಶ್ರೀ. ಚ | ಶ್ರೀಪಾಲಚರಿತೆ |
| ಶ್ರೀ. ಸೂ | ಶ್ರೀಸೂಕ್ತ |
| ಸಂ. ಕೌ | ಸಂಯುಕ್ತಕೌಮುದೀ |
| ಸಂ. ಭಾಗ | ಸಂಸ್ಕೃತಭಾಗವತ |
| ಸ. ವೇ. ಸಿ | ಸರ್ವವೇದಾಂತಸಿದ್ಧಾಂತಸಾರ |
| ಸ. ಪ. | ಸರ್ವಜ್ಞಪದಗಳು |
| ಸ್ವಾ. ನಿ | ಸ್ವಾತ್ಮನಿರೂಪಣ |
| ಸು. | ಸುಭಾಷಿತ |
| ಸು. ಲಾ | ಸುಶ್ಲೋಕಲಾಘವ |
| ಸೂ. ತಾ | ಸೂಕ್ತಿತಾರಾವಳಿ |
| ಸೋ. ಶ | ಸೋಮೇಶ್ವರಶತಕ |
| ಹ. ಧ | ಹರಿಬದೆಯ ಧರ್ಮ |
| ಹ. ಭ. ಸಾ | ಹರಿಭಕ್ತಿಸಾರ |
| ಹ. ಹಂ. | ಹಣ್ಣಾದ ಹಂಬಲಿಕೆ |

॥ ಶ್ರೀಗುರುಭ್ಯೋ ನಮಃ ॥

**ಕೀರ್ತನಕಂಠಾಭರಣ** **ಐದನೆಯ ಭಾಗ**

# ಕೆಲವು ಸತ್ಪುರುಷರ ಕಥೆಗಳು

## ವಿದ್ಯಾರಣ್ಯರು

### ಪೀಠಿಕೆ—ಸ್ವರಾಜ್ಯಸ್ಥಾಪನೆ

ಧನ್ಯಾಸಿ—ಏಕತಾಳ

ಮರೆಯದಿರಲೆ ಮನವೇ ನೀನಿದ ॥ ಪ ॥ ಬಡತನವಿಂಗಲು ಸದ್ಗುರು ಪಾದವ । ಹಿಡಿದಿಷ್ಟಾರ್ಥವ ಪಡೆಯಬೇಕೆಂಬುದ ॥೧॥ ಪುರುಷಯತ್ನವನು ವಿರಚಿಸುತಲೆ ನೀ । ಪರವೋಸ್ಕ್ಯತಿಯನು ಪಡೆಯುವ ಧೈರ್ಯವ ॥೨॥ ತಮ್ಮ ಮೇಲೆ ತಮ್ಮಾಳಿಕೆಯಿರದಿರೆ । ತಮ್ಮ ಸಂಸ್ಕೃತಿಯು ಹೋಗುವದೆಂಬುದ ॥೩॥

**ಜಗತ್ತಿನಲ್ಲಿ ಮನುಷ್ಯನಿಗೆ ಬರುವ ಸುಖದುಃಖಗಳೆಲ್ಲ ಅವನ ಹಿಂದಿನ ಕರ್ಮಗಳಿಗನುಗುಣ ವಾಗಿ ಬರುವುದೇನೋ ನಿಜ. ವಿಚಾರಮಾಡಿದರೆ—**

ಶ್ಲೋ ॥ ನ ಕೇವಲಂ ಮನುಷ್ಯೇಷು ದೈವಂ ದೇವೇಷ್ವಪಿ ಪ್ರಭು ; । ಸಖಿ ಮಿತ್ರೇ ಧನಾಧ್ಯಕ್ಷೇ ಚರ್ಮಪ್ರಾವರಣೋ ಹರಃ ॥ —(ಸು)

**ಅ॥ ಅದೃಷ್ಟವೆಂಬುವದು ಮನುಷ್ಯರಲ್ಲಿ ಮಾತ್ರವೇ ಅಲ್ಲ; ದೇವತೆಗಳ ಮೇಲೆಯೂ ಅದಕ್ಕೆ ಅಧಿಕಾರ. ಕುಬೇರನು ಗೆಳೆಯನಾಗಿದ್ದರೂ ಶಿವನು ಆನೆಯ ಚರ್ಮವನ್ನು ಹೊದ್ದುಕೊಂಡಿರ ವನು.**

**ಸುಖವು ಬಂದಾಗ ಅದನ್ನನುಭವಿಸುವ ಸಡಗರದಲ್ಲಿ ಅದಕ್ಕೆ ಕಾರಣವಾದ ಹಿಂದಿನ ಸತ್ಕರ್ಮ ಗಳ ಅಥವಾ ಆ ಕರ್ಮಗಳನ್ನು ಈಗ ಫಲವನ್ನು ಕೊಡುವುದಕ್ಕೆ ನಿಯಮಿಸಿದ ಪರಮಾತ್ಮನ ನೆನಪು ಬರುವ ಸಂಭವ ಕಡಿಮೆ. ದುಃಖ ಬಂದಾಗ ಮಾತ್ರ ಪಾಪಕರ್ಮಗಳ ನೆನಪು ಕಾಣಿಸಿಕೊಳ್ಳು ವದು. ಆಗ ಅವುಗಳನ್ನು ನೋಡಿದರೆ ಅವು ಯಾವಾಗಲೂ ತಮ್ಮ ಫಲವನ್ನು ಅನುಭವಗೊಳಿಸು ವುದಕ್ಕೆ ಮಾತ್ರವೇ ಆಗಿರದೆ—**

ಶ್ಲೋ || ಯಸ್ಯಾನುಗ್ರಹಮಿಚ್ಛಾಮಿ ತಸ್ಯ ಸರ್ವಂ ಹರಾಮ್ಯಹಮ್ |
—(ಸು)

ಅ|| ಯಾರ ಹಿತವನ್ನು ಬಯಸುತ್ತೇನೋ ಅವರ ಸರ್ವಸ್ವವನ್ನೂ ಅಪಹರಿಸಿಬಿಡುತ್ತೇನೆ. ಹೀಗೆ ಪರಮಾತ್ಮನು ಹೇಳಿರುವಂತೆ ಅದು ಪರಮಾತ್ಮನ ಅನುಗ್ರಹದ ದಾರಿಯಾಗಿರುವದು. ಆದ್ದರಿಂದಲೇ ಜೀವನೋಪಾಯದ ಸೌಕರ್ಯಗಳಿಲ್ಲದ ಮಾತ್ರಕ್ಕೇ ಅವನನ್ನು ದರಿದ್ರನೆಂದು ಹೇಳಲಾಗುವುದಿಲ್ಲ. ದಾರಿದ್ರ್ಯದ ಒರೆಗಲ್ಲನ್ನು ಕುರಿತು ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಶ್ಲೋ || ಸ ತು ಭವತು ದರಿದ್ರೋ ಯಸ್ಯ ತೃಷ್ಣಾ ವಿಶಾಲಾ | ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ || —(ಭ. ನೀ)

ಅ|| ಯಾರಿಗೆ ಆಸೆ ಹೆಚ್ಚೋ ಅವನು ದರಿದ್ರನು. ಮನಸ್ಸಿನಲ್ಲಿ ತೃಪ್ತಿಯಿದ್ದರೆ ಹಣಗಾರನಾರು? ಬಡವನಾರು?

ಒಂದು ಪಕ್ಷ ಅದೃಷ್ಟದಿಂದ ಬಡತನವು ಬಂದಿದ್ದರೂ—

ಶ್ಲೋ || ದೈವಂ ಪುರುಷಕಾರೇಣ ಸಾಧ್ಯಸಿದ್ಧಿನಿಬಂಧನಮ್ | ಯೋಽತಿಕ್ರಮಿತುಮಿಚ್ಛೇತ ಸ ಲೋಕೇ ನಾವಸೀದತಿ || —(ಸು)

ಅ|| ನಾವು ಹಿಂದೆ ಮಾಡಿದ ಕೆಲಸಗಳಿಂದಾಗಿರುವ ಅದೃಷ್ಟವನ್ನು ಯಾವನು ಈಗ ತನ್ನ ಪ್ರಯತ್ನದಿಂದ ಮೀರುವದಕ್ಕೆ ಬಯಸುತ್ತಾನೋ ಅವನು ಜಗತ್ತಿನಲ್ಲಿ ನಾಶವಾಗುವದಿಲ್ಲ.

ಅದಕ್ಕೆ ದಾರಿಯಾವದೆಂದರೆ—

ಶ್ಲೋ || ನಾಚರ ಸ್ವಹಿತಜಾತಕಘಾತಕಂ | ಪಾತಕಂ ತು ನಿರಯೇ ನಿಪಾತಕಮ್; || ಶಂಭವೇ ಸ್ಪೃಹಯ ಮಾನಸಾನಿಶಂ; | ಶಂ ಭವೇಽಪಿ ಭವತೋ ಭವೇದ್ಧ್ರುವಮ್ || —(ಸು. ಲಾ)

ಅ|| ಎಲೇ ಮನಸ್ಸೆ, ತನ್ನ ಹಿತವನ್ನು ಹಾಳುಮಾಡುವಂಥ ಮತ್ತು ನರಕಕ್ಕೆ ಕೆಡಹುವಂಥ ಪಾಪಕೃತ್ಯಗಳನ್ನು ಮಾಡಬೇಡ. ಶಿವನಿಗೆ ಶರಣು ಹೋಗು. ಸಂಸಾರದಲ್ಲಿ ಕೂಡ ನಿನಗೆ ಸುಖವಾದೀತು.

ಹೀಗೆ ದೇವರಿಗೆ ಶರಣುಹೊಕ್ಕವರು ತಮ್ಮ ಭಾಗ್ಯವನ್ನು ಭಾವಿಸುವದೆಂತೆಂದರೆ—

ಧನ್ಯಾಸಿ—ಆದಿತಾಳ

ನಮ್ಮ ಭಾಗ್ಯ ದೊಡ್ಡದೋ ನಿಮ್ಮ ಭಾಗ್ಯ ದೊಡ್ಡದೋ? || ಪ || ಸಮ್ಮತಿಯಿಂದ ನಾವು ಸಾಟಿಮಾಡಿ ನೋಡೋಣ ಬನ್ನಿ || ಅ. ಪ || ಹೇಮರಜತಾದಿಗಳು ಹೋದೀತೆಂಬ ಭಯಗಳುಂಟು ನಿಮಗೆ; | ರಾಮನಾಮ ನಾಣ್ಯಾಕ್ಕಿನ್ನು ಯಾರ ಭಯವೂ ಇಲ್ಲವಯ್ಯ || ೧ || ಇರುವ ಧಾನ್ಯ ಬೆಲ್ಲ ತುಪ್ಪ ಸವೆದೀತೆಂಬ ಭಯಗಳುಂಟು; | ಹರಿನಾಮದ ವೃತ್ತಿಗಿನ್ನು ಯಾರ ಭಯವೂ ಇಲ್ಲವಯ್ಯ || ೨ || ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲತೆಯ ಭಯವು ಉಂಟು; | ಗೋಪಾಳದ ವೃತ್ತಿಗಿನ್ನು ಯಾರ ಭಯವೂ ಇಲ್ಲವಯ್ಯ || ೩ || ಕಡಗ ಕಂಠ

ಮಾಲೆಗಿನ್ನು ಕಳ್ಳರಿಂದ ಭಯವುಂಟು; | ಅಡವಿಯ ತುಲಸೀಮಾಲೆಗಿನ್ನು ಯಾರ ಭಯವೂ ಇಲ್ಲವಯ್ಯ || ೪ || ನಿಮ್ಮ ಭಾಗ್ಯದೇವಿ ಲಕ್ಷ್ಮಿ ನಮ್ಮ ನಾರಾಯಣನ ಪತ್ನಿ; | ನಮ್ಮೊಡೆಯ ಶ್ರೀಪುರಂದರವಿಠಲ; ಎಮ್ಮ ನಿಮ್ಮ ಸಂರಕ್ಷಿಪನು||–(ದಾ)

ಆದ್ದರಿಂದ ಭಗವಂತನಿಗೆ ಶರಣುಹೋಗೆಂದು ಒಬ್ಬ ಕವಿಯು ಹೇಳಿರುವದೇನೆಂದರೆ—

ವೃ|| ಜನಿಯಿಸುತಿರ್ಪ ಕೋಟಿಜನುಮಂಗಳೊಳುತ್ತಮಮರ್ತ್ಯಪೂರ್ವಪಿಾ| ಮನುಜಭವಂ; ವಿಚಾರಿಪೊಡಿದಂ ಪಡೆದುಂ ಪುರುಷಾಗಿ ನತ್ತೊಡೀ || ಜನನ ವಿದೆಂತು ಬರ್ಪುದು ?; ವ್ಯಥಾ ಕೆಡದಿರ್; ನಿರಂತರಂ | ನಿನಗೆ ಹಿತೋಪದೇಶ ಮಿದು ; ಮಾನವ, ಪೂಜಿಸು ಹಂಪೆಯಾಳ್ದನಂ || — (ವಿ. ಶ)

ವಿದ್ಯೆಯನ್ನು ಕಲಿತದ್ದಕ್ಕೆ ಇದೇ ಫಲವೆಂದು ಮತ್ತೊಬ್ಬ ಕವಿ ಹೇಳಿರುವದೇನೆಂದರೆ—

ವೃ|| ಶಾಸ್ತ್ರಂ ಬಂದೊಡೆ ಶಾಂತಿ, ಸ್ಥೈರಣೆ, ನಿಗರ್ವಂ, ನೀತಿ, ಮೆಲ್ಮಾತು, ಮುು | ಕ್ತಿಸ್ತ್ರೀಚಿಂತೆ, ನಿಜಾತ್ಮಚಿಂತೆ–ನಿಲವೇಳ್ಕಂತಲ್ಲದಾ ಶಾಸ್ತ್ರದಿಂ || ದು ಸ್ತ್ರೀಚಿಂತನೆ, ದುರ್ಮುಖಂ, ಕಲಹಮುದ್ಗರ್ವಂ ಮುಸಂಗೊಂಡೊಡಾ | ಶಾಸ್ತ್ರಂ ಶಾಸ್ತ್ರಮೆ ? ಶಾಸ್ತ್ರಿ ಶಸ್ತ್ರಿಕನಲಾ ! ರತ್ನಾಕರಾಧೀಶ್ವರಾ ||— (ರ. ಶ.)

ಹೀಗೆ ಮಾಡದೆ ಹೋದರೆ ಮನುಷ್ಯಜನ್ಮವೇ ವ್ಯರ್ಥವೆಂದು ಒಬ್ಬ ಮಹಾತ್ಮರು ಹೇಳಿರುವದೇನೆಂದರೆ—

—ಝಂಪೆ—

ವೃ|| ನೋಡೆ ಕಣ್ಣುಂಟು; ಧ್ಯಾನವ ಮಾಡೆ ಮನಮುಂಟು;–ಹಾಡುವೊಡೆ ರಾಗಮುಂಟು; | ಹಾಡ ಕೇಳುವೊಡೆ ಕಿವಿಯುಂಟೊಲಿದು ಪೂಜಿಯನು-ಮಾಡೆ ಹಸುರೆಲೆಗಳುಂಟು; || ಮಾಡಿದುದನೆಲ್ಲ ಕೈಕೊಳಲೀಶ್ವರನೆ ಪ್ರೀತಿ-ಗೂಡಿ ತಾನಿದಿರೊಳಿರಲು | ನೋಡೆ ನರಜನ್ಮವನು ಮಣ್ಣುಗೂಡಿಸಲೇಕೆ ?–ಕೇಡಿಗೇಡಪ್ಪಿರಯ್ಯೋ ! —(ಹ. ಹಂ)

ಹೀಗೆ ಮಾಡಿ ಶಿವನ ಅನುಗ್ರಹವನ್ನು ಪಡೆದವನು ಎಂಥ ಪ್ರಬಲವಾದ ಲೋಕವ್ಯವಹಾರದಲ್ಲಿದ್ದರೂ ಅವನಿಗೆ ಬಾಧಕವಿಲ್ಲವೆಂದು ಜ್ಞಾನಿಗಳು ಹಾಡಿರುವದೇನೆಂದರೆ—

ಶಂಕರಾಭರಣ

ಯಾವ ಕೃತ್ಯದೊಳಿರುತಿರ್ದರು ಶಿವಯೋಗಿ | ಭಾವದೊಳಗೆ ಬ್ರಹ್ಮವನು ಬಿಡದಿಹನು || ಪ || ಸ್ವರವಭಿನಯ ತಾಳ ರಸಭಾವಗಳನೊಂದಿ | ಸಿರದ ಕುಂಭವ ಮರೆಯದ ನಟಿಯಂತೆ || ಕರಣೇಂದ್ರಿಯಗಳ ವಿಷಯಭೋಗಪರನಾಗಿ | ಪರಮಾತ್ಮನರುಹಿನೆಚ್ಚರದಪ್ಪದಿಹನು || ೧ || ಮನೆಗೆಲಸಗಳ ಮಾಡುತಲಿರ್ದು ಸಂಕೇತ | ದಿನಿಯನ ನೆನೆಸುತಿರುವ ಪಾಣ್ಮೆಯಂತೆ || ತನುಧನವನಿತಾದಿ ಸಂಸಾರವನು ಹೊಂದಿ | ಮನದೊಳಾತ್ಮನ ಲಕ್ಷ್ಯವನು ಬಿಡದಿಹನು || ೨ || ಮೆರೆವೇಳುತೆರದ ವಿದ್ಯವ ಸಾಗಿಸುತೆ ಬೆನ್ನ | ಹರಳನೆಣಿಸಿಕೊಂಬುವವಧಾನಿ

ಯಂತೆ || ಹೊರಗೆ ಸಕಲಲೋಕವ್ಯವಹಾರದೊಳಗಿರ್ದು | ಗುರುಸಿದ್ಧನನು ಸಂಧಾನದಿ ಬೆರೆತಿಹನು || ೩ || —(ಕೈ. ಕ)

ಇಂಥ ಸ್ಥಿತಿಯನ್ನು ಪಡೆಯುವದಕ್ಕೆ ಸಾಧನವಾಗಿಯೇ ಪೀಠಿಕೆಯಲ್ಲಿ ಭಾಗವತೋತ್ತಮರು 'ಮರೆಯದಿರಲೆ ಮನವೆ' ಎಂದು ಉಪದೇಶ ಮಾಡಿರುವರು. ಇದಕ್ಕೆ ನಿದರ್ಶನವಾಗಿ ಶ್ರೀ ವಿದ್ಯಾರಣ್ಯಾಖ್ಯಾನವು ಯಥಾಮತಿ ವಿವರಿಸಲಾಗುವುದು.

---

## ಆಖ್ಯಾನ

ಕೀ|| ಕರ್ಣಾಟಕದೊಳು ಪಡೆದಿರ್ದರು ಹೆಸ | ರನ್ನು ಶ್ರೀಮತೀಮಾಯಣರು || ಸನ್ನುತರಿಹ ದಂಪತಿಗಳೆನಿಸಿ ಶಿವನನ್ನು ಪೂಜಿಸುವ ಗುಣಯುತರು ||

ಕರ್ಣಾಟಕವು ಬಹಳ ಪುರಾತನವಾದ ರಾಜ್ಯವೆಂತೆಂದರೆ—

ಸಾ|| ಅಮೆರಿಕ ಚೀನ ಬರ್ಮಾಸಿಂಗ್ಲೆಂಡು | ಭೂಮಿಯಿಂ ಕಣ್ಮುಚ್ಚಿರಲು || ಅಮಮಾ! ಕರ್ಣಾಟಕಕೆ ವಿವೇಕದಿನಮತ್ತೈಶ್ವರ್ಯದ ಬಾಳು ||

ಅದರ ಪ್ರಭಾವವೆಷ್ಟರಮಟ್ಟಿಗಿತ್ತೆಂದರೆ—

ಕಂ|| ದಕ್ಷಿಣವುಮನಲ್ಲದೆ ಬಹು | ದಕ್ಷತೆಯಿಂದುತ್ತರವುಮನಂಜಿಪ ರಣದೊಳ್ || ದೀಕ್ಷಿತನಹ ಪುಲಿಕೇಶಿಯ | ದೀಕ್ಷೆಯ ನೆಲಸಿದಕೆ ಸರಿಯದಾವುದೊ! ಧರೆಯೊಳ್! || —(ವಿ ಕಾ)

ಈ ಏಳಿಗೆಯು ದಿನದಿನಕ್ಕೆ ಕಡಿಮೆಯಾಗುತ್ತಾ ಬಂದದ್ದು—

ದ್ವಿ|| ವಿಕ್ರಮಾದಿತ್ಯನಾಳಿದ ಮೇಲಿನವರು | ವಿಕ್ರಮವಿಹೀನರದರಿಂ ಬಂತು ಬಿದರು; || ನೆರೆ ಪೂರ್ವದಿಕ್ಕಿನಿಂ ರಾಷ್ಟ್ರೀಯ ಮಹತಿ | ಭರದಿಂದ ಪಶ್ಚಿಮಕೆ ಸರಿಯಿತೆಂಬಂತೆ || ಹುರಿಗೂಡುತಿರೆ ಪಶ್ಚಿಮದ ಜನಾಂಗತ್ವ | ನೆರೆ ಸಡಿಲವಾಯ್ತು ಕರ್ಣಾಟಕದಿ ಸತ್ತ್ವ ||

ಈ ಕಾಲದಲ್ಲಿ—

ಕು|| ವರತುಂಗಭದ್ರೆ ತಾ | ಹರಿವ ಪಂಪಾಕ್ಷೇತ್ರ | ದುರುಭಕ್ತಮಾಯಣನ ಗರ್ಭದಲ್ಲಿ || ನೆರೆ ಜನಿಸಿದನು ಪುತ್ರ | ನರಿಯಲಾ ಲಕ್ಷಣವ | ಪರಮಮಂಗಲವೆನಿಸಿ ಲೋಕದಲ್ಲಿ ||

ಆಗ ನಾಮಕರಣವಾದದ್ದು—

ಕಂ|| ಭೂದೇವಶಿಶುವಿದರೊಳು | ಮಾಧವ ಲಕ್ಷಣವುವಿರ್ದು ಬಡತನವೆಂತುಂ || ಪೋದಪುದೆನೆ ಕಳೆದುತ್ಸವ | ಮಾಧವನಿವನೆಂದರಾಗ ನಲಿಯುಲ್ಲಾಸ್ವಂತಂ || —(ವಿ. ಕಾ)

ಜೋಯಿಸರು ಜಾತಕವನ್ನು ಬರೆದು ನೋಡಿ ಹೇಳಿದ್ದು—

ಲ. ರ|| ಗುರುವು ತಾನೀ ಜಾತಕದೊಳುಚ್ಚನಾಗಿಹುದು | ಗುರುವು ತಾ ಸಿಳೆಗಿಳಿದು ಬಂದಂತೆ ಕಾಣುವದು; || ಆಯುಷ್ಯದಾಯುವನು ತೋರೆ ಮಾಸವ ರಲ್ಲಿ | ಆಯುಷ್ಯ ಪೂರ್ಣದಾಯುವ ತೋರಲಿಹನಿಲ್ಲಿ; || ಭೋಗವೈರಾಗ್ಯ ಗಳು ಜೊತೆಯೊಳಿರಬಹುದೆಂದು | ಈಗ ತೋರುವನಿವನು ಜನಸಮಾಜ ಕ್ಕಿಂದು; ||

ಅವನು ದೊಡ್ಡವನಾಗುತ್ತಲಿ ವಿದ್ಯೆಯನ್ನಾರಂಭಿಸಿ—

ಕಂ|| ಸರ್ವಜ್ಞವಿಷ್ಣುಗುರುವಿಂ | ಸವಾರ್ಥವನರಿದು ದರ್ಶನಂಗಳೊಳಾಗಳ್ || ಸರ್ವಜ್ಞನಿವನುಮೆಂದೆನೆ | ಸರ್ವಂಸಹೆಯಲ್ಲಿ ಪೆಸರನಾಂತಂ ಬುಧರೊಳ್ || —(ವಿ. ಕಾ)

ಅಷ್ಟರಿಂದಲೇ ತೃಪ್ತನಾಗದೆ—

ವೃ|| ತೀರ್ಥವಿಶೇಷದೊಳ್ಪೆಸರನಾಂತಿರುತೊಪ್ಪುವ ತುಂಗಭದ್ರೆಯಾ | ತೀರ್ಥದೆ ವಿಂದು ತಂದೆಯು ಹೃದಬ್ಜಮರಂದಪುದೆಂಬ ಬೋಧೆಯಾ || ತೀರ್ಥವ ಪೀರ್ದು ವಿಷ್ಣುಗುರುಗೈದುಪದೇಶವಿಶೇಷರೂಪದಾ | ತೀರ್ಥದೊಳೀಸಿಯುಂ ಬಯಸಿದಂ ವಿಗೆ ತೀರ್ಥವ ಬೇರೆ ಮಾಧವಂ || —(ವಿ. ಕಾ)

ಆಗ ಕಂಚಿಯಲ್ಲಿದ್ದ ಶ್ರೀ ವಿದ್ಯಾತೀರ್ಥಮಹಾಸ್ವಾಮಿಗಳವರಲ್ಲಿ ಗುರುಕುಲವಾಸವನ್ನು ಮಾಡಿದ ಮೇಲೆ ಅವರು ವಿದ್ಯಾಭ್ಯಾಸವನ್ನು ಮುಗಿಸಿ ಕೊನೆಗೆ ಆಜ್ಞೆಮಾಡಿದ್ದು—

ರೇಗುಪ್ತಿ—ಅಟತಾಳ

ಇದು ನಿನಗುಪದೇಶ | ಕೇಳೈ | ಇದು ನಿನಗುಪದೇಶ || ಪ || ಇದುವರಿಗಿಲ್ಲಿಯು ವಿದ್ಯಾಭ್ಯಾಸವ | ಮುದದಿ ಮುಗಿಸಿ ಮನೆಗೈದುತ್ತಿಹನಿಗೆ || ಅ. ಪ || ಮದುವೆಯಾಗು ನೀನು | ಸತ್ಕುಲ | ವಧುವಾದವಳನ್ನು; || ಚದುರಿಂ ವ್ಯಾಸಂಗವ ಮುಂದರಿಸು | ತ್ತಿದ ಹಬ್ಬಿಸಿ ಹೆಚ್ಚಿಸು ಪಂಡಿತರನು || ೧ || ಸತ್ಯ ಶಮದಮಗಳ | ತಪ್ಪದೆ | ನಿತ್ಯದ ನಿಯಮಗಳ || ಮತ್ತೆ ತಪಃಶಕ್ತಿಯನಾರ್ಜಿಸುತಲಿ | ಎತ್ತಿ ಹಿಡಿದು ನಿಲ್ಲಿಸು ಧರ್ಮಂಗಳ || ೨ || ಅತಿಥಿಗಳೈತರಲು | ಮನದೊಳು | ಹಿತದಿಂ ಸತ್ಕರಿಸು; || ಕ್ಷಿತಿಯೊಳಗಿರ್ಪೆಲ್ಲಾ ಮನುಜರ ಸು | ಸ್ಥಿತಿಯನು ಸರ್ವವಿಧದಿ ನೀ ಸಾಧಿಸು || ೩ ||

ಆಗ ಮಾಧವನು ತನ್ನಿಂದೇನಾದರೂ ಗುರುದಕ್ಷಿಣೆಯನ್ನು ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸಿದಾಗ ಆ ಸ್ವಾಮಿಗಳು ಹೇಳಿದ್ದು—

ಕಂ|| ಗುರುಗಳ್ಗೆ ಧರೆಯು ಧಾರೆಯು | ನೆರೆದೊಡಮದು ಪಾದಪೂಜೆಯೇ ಎಂದೆನಿಕುಂ; || ಅರಿಯಲ್ಕಧರ್ಮದ ವೃದ್ಧಿಗೆ | ನೆರವಪ್ಪುದೆ ಪೂಜೆ ಜನಕುಮೆನ್ನಯ ಮನಕುಂ || —(ವಿ. ಕಾ)

ಅಲ್ಲಿಂದ ಮಾಧವನು ಮದುವೆಯನ್ನು ಮಾಡಿಕೊಂಡು ಪಾಂಡಿತ್ಯದ ಪ್ರಭಾವದಿಂದ ಬೇಕಾದಷ್ಟು ಹಣವನ್ನು ಸಂಪಾದಿಸುತ್ತ ಮನೆಯಲ್ಲಿ ಅನೇಕ ವಿದ್ಯಾರ್ಥಿಗಳನ್ನಿಟ್ಟುಕೊಂಡು ಪಾಠವನ್ನು ಹೇಳುತ್ತ ಅತಿಥಿಸತ್ಕಾರವನ್ನು ನಡೆಸುತ್ತಿದ್ದಾಗ—

ಶ್ಲೋ॥ ಸವಿಪ್ರಪಾದೋದಕಕರ್ದಮಾನಿ । ಸವೇದಶಾಸ್ತ್ರಧ್ವನಿಗರ್ಜಿತಾನಿ ॥ ಸ್ವಾಹಾಸ್ವಧಾಕಾರನಿರಂತರಾಣಿ । ಸ್ವಾನಂದತುಲ್ಯಾನಿ ಗೃಹಾಣಿ ತಾನಿ ॥ —(ಸು)

ಅ॥ ಬ್ರಾಹ್ಮಣರ ಕಾಲನ್ನು ತೊಳೆದ ನೀರಿನಿಂದ ಕೆಸರಾಗಿಯೂ ವೇದಶಾಸ್ತ್ರಗಳ ಧ್ವನಿಯಿಂದ ಗದ್ದಲವಾಗಿಯೂ ದೇವತೆಗಳಿಗೂ ಪಿತೃಗಳಿಗೂ ಯಾವಾಗಲೂ ತೃಪ್ತಿಗೊಳಿಸುತ್ತಿರುವವಾಗಿಯೂ ಇರುವ ಮನೆಗಳು ಬ್ರಹ್ಮಾನಂದಕ್ಕೆ ಸಮ.

ಎಂಬ ವಚನವು ಮೂರ್ತಿಮತ್ತಾದಂತೆ ಕಾಣುತ್ತಿತ್ತು. ಈ ಸಂದರ್ಭದಲ್ಲಿ ಸಂಪಾದಿಸಿದ ಹಣವೆಲ್ಲ ನೀರಿನಂತೆ ವೆಚ್ಚವಾಗಿ ಹೋಗುತ್ತಿದ್ದದ್ದನ್ನು ನೋಡಿದರೆ—

ಶ್ಲೋ॥ ವಿತ್ತಂ ಚಿತ್ತಭ್ರಮಕರಂ; ಜಿಜ್ಞಾಸೋ, ಮಾಸ್ಮ ಸಂಗ್ರಹೀಃ; । ವಿತ್ತಸ್ಯ ತಸ್ಯ ತುತ್ಯಾಗೇ ನೂನಂ ವಿದುಪಲಭ್ಯತೇ ॥ —(ಸು. ಲಾ)

ಅ॥ (೧) ಜ್ಞಾನವನ್ನು ಬಯಸುವವನೆ, ಮನಸ್ಸಿಗೆ ಭ್ರಮೆಯನ್ನುಂಟುಮಾಡುವಂಥ ಹಣವನ್ನು ಕೂಡಿಹಾಕಬೇಡ. ಆ (ವಿತ್ತಸ್ಯ ತು) ಹಣವನ್ನು ದಾನಮಾಡಿದರೆ (ವಿತ್ ಉಪಲಭ್ಯತೇ) ಜ್ಞಾನಪ್ರಾಪ್ತಿಯಾಗುತ್ತದೆ. (೨) ಆ ವಿತ್ತದ ಕೊನೆಯ ತ ಎಂಬಕ್ಷರವನ್ನು ತೆಗೆದುಹಾಕಿದರೆ ವಿತ್ ಎಂದರೆ ಜ್ಞಾನವೇ ಉಳಿಯುತ್ತದೆ.

ಹೀಗೆ ತನ್ನನ್ನು ಉಳಿಸಿಕೊಳ್ಳದಿರುವದನ್ನು ನೋಡಿ ಲಕ್ಷ್ಮಿ ಹಿಮ್ಮುಖಳಾಗುವದಕ್ಕೆ ಮೊದಲು ಮಾಡಿದ್ದೇಕೆಂದರೆ—

ಶ್ಲೋ॥ ಪೀತೋಽಗಸ್ತ್ಯೇನ ತಾತಶ್ಚರಣತಲಹತೋ ವಲ್ಲಭೋಽನ್ಯೇನ ರೋಷಾ । ದಾಬಾಲ್ಯಾದ್ವಿಪ್ರವರ್ಯೈಃ ಸ್ವವದನವಿವರೇ ಧಾರಿತಾ ವೈರಿಣೀ ಮೇ; ॥ ಗೇಹಂ ಮೇ ಛೇದಯಂತಿ ಪ್ರತಿದಿವಸಮುಮಾಕಾಂತಪೂಜಾನಿಮಿತ್ತಂ; । ತಸ್ಮಾತ್ಖಿನ್ನಾ ಸದಾಹಂ ದ್ವಿಜಕುಲಸದನಂ ನಾಥ ನಿತ್ಯಂ ತ್ಯಜಾಮಿ ॥ —(ಸು)

ಅ॥ ಅಗಸ್ತ್ಯನೆಂಬ ಬ್ರಾಹ್ಮಣನು ನನ್ನ ತಂದೆಯಾದ ಸಮುದ್ರವನ್ನು ಕುಡಿದುಬಿಟ್ಟನು. ಇನ್ನೊಬ್ಬ (ಭೃಗು) ಋಷಿಯು ನನ್ನ ಗಂಡನಾದ ಕೃಷ್ಣನನ್ನು ಕಾಲಿನಿಂದೊದೆದನು. ಬ್ರಾಹ್ಮಣಶ್ರೇಷ್ಠರು ಚಿಕ್ಕಂದಿನಿಂದಲೂ ನನ್ನ ಹಗೆಯಾದ ಸರಸ್ವತಿಯನ್ನು ಬಾಯಲ್ಲಿ ಮುಚ್ಚಿಟ್ಟುಕೊಳ್ಳುತ್ತಾರೆ. ಮತ್ತು ಪಾರ್ವತಿಯ ಗಂಡನ ಪೂಜೆಗೆಂದು ಪ್ರತಿದಿನವೂ ನನ್ನ ಮನೆಯಾದ ಕಮಲವನ್ನು ಮುರಿಯುತ್ತಾರೆ. ಆದ್ದರಿಂದ ನಾನು ಯಾವಾಗಲೂ ವ್ಯಸನಗೊಂಡು ಬ್ರಾಹ್ಮಣರ ಮನೆಯನ್ನು ತೊರೆಯುತ್ತೇನೆ. "

ಹೀಗೆ ಲಕ್ಷ್ಮಿ ಹಿಮ್ಮೆಟ್ಟುತ್ತಲೆ ಮಾಧವನು ಪ್ರತಿಜ್ಞೆಮಾಡಿದ್ದು—

ಕಂ|| ಮಾ ಇಲ್ಲದೆ ಧವನಾರಿಗೆ ? | ಮಾಯಣಸುತಗಿಟ್ಟ ಹೆಸರಿನೀ ದುರ್ವ್ಯಶವುಂ || ಮಾಯಿಸಿ ಮೇಲ್ವರಿಸಿದಪೆಂ | ಮಾಯಾತೀತಮಿದೆಸಲ್ಪುರೋಹಿತವಚನಂ || —(ವಿ. ಕಾ)

ಎಂದು ಲಕ್ಷ್ಮಿಯನ್ನು ಕುರಿತು ತಪಶ್ಚರ್ಯೆಯನ್ನು ಮಾಡಿ ಪ್ರಾರ್ಥಿಸಿದ್ದು—

ಮಧ್ಯಮಾವತಿ—ಆದಿತಾಳ

ಭಾಗ್ಯದ ಲಕ್ಷ್ಮಿ ಬಾರಮ್ಮ | ನಮ್ಮಮ್ಮ ಶ್ರೀ | ಭಾಗ್ಯದ ಲಕ್ಷ್ಮಿ ಬಾರಮ್ಮ || ಪ || ಗೆಜ್ಜೆಯ ಕಾಲ ನಾದವ ಕೇಳುತ | ಸಜ್ಜನಸಾಧು ಪೂಜೆಯ ವೇಳೆಗೆ | ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ | ಮಜ್ಜಿಗೆಯೊಳಗಿನ ಬೆಣ್ಣೆಯಂತೆ || ೧ || ಸಂಖ್ಯೆ ಇಲ್ಲದ ಭಾಗ್ಯವ ಕೊಟ್ಟು | ಕಂಕಣಕಯ್ಯ ತಿರುವುತ ಬಾರೆ; || ಕುಂಕುಮಾಂಕಿತೆ, ಪಂಕಜಲೋಚನೆ, | ವೆಂಕಟರಮಣನ ಪಟ್ಟದ ರಾಣಿಯೆ || ೨ || ಕನಕವೃಷ್ಟಿಯ ಕರೆವುತ ಬಾರೆ; | ಮನಕೆ ಸರ್ವದ ಸಿದ್ಧಿಯ ಮಾಡೆ; || ದಿನಕರಕೋಟಿತೇಜದಿ ಹೊಳೆವ | ಜನಕರಾಯನ ಕುಮಾರಿ, ಬಾರೆ || ೩ || ಅತ್ತಿತ್ತಗಲದೆ ಭಕ್ತರ ಮನೆಯಲಿ | ನಿತ್ಯಮಹೋತ್ಸವ ನಿತ್ಯಸುಮಂಗಲ || ಸತ್ಯದಿ ತೋರುತ ಸಜ್ಜನರುಗಳಿಗೆ | ಚಿತ್ತಕೆ ಹೊಳೆಯುವ ಪುತ್ಥಳಿಗೊಂಬೆ || ೪ || ಸಕ್ಕರೆ ಹಾಲ ಕಾಲುವೆ ಹರಿಸಿ | ಶುಕ್ರವಾರದ ಪೂಜೆಯಗೊಳ್ಳೆ; || ಅಕ್ಕರದಿಂದಲಿ ಅಳಗಿರಿರಂಗನ | ಪುರಂದರ ವಿಠಲನ ಪಟ್ಟದ ರಾಣಿಯೆ || ೫ || —(ದಾ)

ಅದಕ್ಕೆ ಉತ್ತರವಾಗಿ ಲಕ್ಷ್ಮಿ ಅಶರೀರವಾಣಿಯಿಂದ ಹೇಳಿದ್ದು—

ಸಾ|| ಮುನಿವರ, ಬಿಡು ಬಿಡು ಹಠವನು; ನಿನಗೀ | ಜನುಮದೊಳಿನ್ನೊಲವಿಲ್ಲ; || ಮನದೊಳಗಿರುವದು; ಮರೆಯೆನು; ಮುಂದಿನ | ಜನುಮದೊಳೀಯುವೆನಲ್ಲ ||

ಇದನ್ನು ಕೇಳಿ ಮಾಧವನು ಬೇಸರಗೊಂಡು ಇನ್ನು ಸಂನ್ಯಾಸವನ್ನು ಮಾಡಬೇಕೆಂದು ಶೃಂಗೇರಿಗೆ ಹೋಗಿರುವಾಗ—

ಕೀ|| ದಕ್ಷಿಣಕಾಶಿಯ ಬಳಿಯೊಳಗಿರುತಿಹ | ದಕ್ಷಿಣಹಸ್ತಿನಾವತಿಯಲ್ಲಿ || ಈಕ್ಷಿಸೆ ಹರಿಹರಬುಕ್ಕರು ಬೆಳೆದರು | ಉಕ್ಷವಾಹನನ ರಕ್ಷೆಯಲಿ ||

ಈ ಸ್ಥಿತಿಯಲ್ಲಿ ಆನೆಯಗೊಂದಿಯಮೇಲೆ ಮಹಮ್ಮದೀಯರ ದಾಳಿ ಬಂದಿದೆ |

ರ|| ಬಂದಿತು ತುರುಕರ ದಂಡು | ಮೋಣ್ಣೊಂದಿತಾಗ ಮುಂಕೊಂಡು || ಪ || ಚರಣದ ಹತಿಯಿಂ ಧರೆಯ ನಡುಗಿಸುತ | ಭರದಿ ಕಂಡವರ ಬಗೆಯನುಡುಗಿಸುತ || ಕೊಬ್ಬಿದ ಕಂಠರವದೊಳುಗ್ಗಡಿಸುತ | ಉಬ್ಬಿಬಂದ ಜನರನು ಕಂಗೆಡಿಸುತ || ಕಾಲಧೂಳಿಯನು ಮೇಲಕೆಬ್ಬಿಸುತ | ಲೀಲೆಯಿಂದ ತಮ್ಮವರನುಬ್ಬಿಸುತ || ಕರವಾಳಗಳನು ಕರದಲಿ ಜಡಿಯುತ | ತುರಗಂಗಳ ಕಡಿವಾಣವ ಹಿಡಿಯುತ || ಕಣ್ಣುಗಳಿಂ ಕೆಂಡಗಳನು ಚೆಲ್ಲುತ | ಬಣ್ಣಗೆಡಿಸಿ ಬಂದವರನು ಗೆಲ್ಲು

ತ || ಹಿಂದೆ ಮುಂದೆ ನೋಡದೆ ತರಿದೊಟ್ಟುತ | ಹಿಂದುಗಳೆಲ್ಲರ ಮುಸುಕಿಯು ಕಟ್ಟುತ || ಊರೂರುಗಳಿಗೆ ಬೆಂಕಿಯು ಹಚ್ಚುತ | ದಾರಿಯೊಳರಿಗಳನೆಲ್ಲರ ಕೊಚ್ಚುತ || ಗುಡಿಗಳೆಲ್ಲವನು ನೆಲಸಮ ಮಾಡುತ | ಬಿಡದೆ ಮಸೀತಿಯು ಕಲ್ಲಸು ಹೂಡುತ || ವಿಗ್ರಹವೆಲ್ಲವ ಪುಡಿಪುಡಿಗುಟ್ಟುತ | ವಿಗ್ರಹಪೂಜಕರನು ಕಡಿದೊಟ್ಟುತ | ಹಿಂದೂಜನಗಳ ಧರ್ಮವ ಬಿಡಿಸುತ | ಬಂಧಿಸುತವರಾಚಾರವ ಕೆಡಿಸುತ || ಬಲದಿಂದ ಮುಸಲ್ಮಾನರ ಮಾಡುತ | ಕುಲವ ಕೆಡಿಸಿ ಲಲನೆಯರಸು ಕೂಡುತ || ಸತ್ಪುರುಷರೆಲ್ಲರ ತೋರಣಗಟ್ಟುತ | ಸುತ್ತಲು ಜನಗಳ ನೆತ್ತಿಯ ಮೆಟ್ಟುತ || ಅರಸರ ಬಿರುದನು ಸರಸದಿ ಮೆರೆಸುತ | ಭರದಿ ಸಿಂಹಪೀಠದಿ ಕಾಲಿರಿಸುತ || ಓರಂಗಲ್ಲನು ಚೂರುಮಾಡುತ | ದ್ವಾರಸಮುದ್ರದ ದಾರಿಗೆಡಿಸುತ || ದೇವಗಡವು ವಶವಾಗಿರೆ ನಲಿಯುತ | ದೇವಗಿರಿಯು ಹರಪಾಲಸ ಸುಲಿಯುತ ||

ಈ ಹಾವಳಿಯನ್ನು ತಡೆಯಲಾರದೆ ಶ್ರೀವೇದಾಂತದೇಶಿಕರೆಂಬ ಧಾರ್ಮಿಕಪುರುಷರ ಬಾಯಿಂದ ಹೊರಟದ್ದೇನೆಂದರೆ—

ವೃ|| ಗದಾಸುದರ್ಶನಂಗಳುಂ ಸುಶಾರ್ಙನಂದಕಂಗಳುಂ | ತ್ವದೀಯ ದಿವ್ಯಶಕ್ತಿಯುಂ ಪ್ರದರ್ಶಿಸಲ್ಕೆ ಬಾರವೇಂ? || ಸದಾಶ್ರಯಂ ದಯಾಮಯಂ ವಿಜೃಂಭಿಸುತ್ತೆ ದೇವ, ನೀಂ | ವಿದೂರಗೈವುದೀಗಳೀ ವಿದೇಶಿದುಷ್ಟಜಾಲಮಂ ||
—(ಸು)

ಆಸಮಯದಲಿ ಬುಕ್ಕನ ಹೆಂಡತಿಯಾದ ಹೊನ್ನಮ್ಮನು ಗಂಡನಿಗೆ ಹೇಳಿದ್ದು—

ಜಂಗಲ್—ಏಕತಾಳ

ತ|| ಎಂತಿದ ಸಹಿಸುವಿ | ರಿಂತಿದ ಮನದಲಿ | ಚಿಂತೆಯು ನಿಮಗಿರಬೇಡವೆ ಹಾಯ್ | || ಶಾಂತೆಯರಕ್ಷಿಯು | ಸಂತತಧಾರೆಯು | ನೆಂತು ತೊಳೆಯುದಿರ್ಪಿರಿ? ಹಾಯ್ ಹಾಯ್ ! || ೧ || ವೇದಶಾಸ್ತ್ರಗಳ | ಹಾದಿಯು ಕಟ್ಟಿದೆ; | ಭೂದೇವರ ಕೇಳುವರಿಲ್ಲ; || ಸಾಧುಜನಗಳಿಗೆ | ಖೇದವ ಕೊಡುತಿಹ | ಈ ದುರ್ಗತಿಗೇಂ ಪೇಳಲಿ? ಹಾಯ್ ! || ೨ || ಗಡಿಗಳು ಹೋದವು; | ಗುಡಿಗಳು ಹೋದವು; | ಮಡದಿಯರೆಲ್ಲರು ಹೋದರು; ಹಾಯ್ | || ಬಿಡದೆ ಗುರುಜನರು | ಪಡೆದರು ಕಷ್ಟವ; | ನುಡುನುಡು ನಮ್ಮಯ ಬಾಳನು ಹಾಯ್ ! || ೩ || ದುರುಳರ ಪಾದದ | ಭರದಲಿ ಧೂಳಿಡೆ | ಭರತಮಾತೆ ಕಂಗೆಟ್ಟಳೊ ಹಾಯ್ ! || ಪರಿಪರಿಯಲಿ ನಾವು | ಪರಿಭವವನು ತಳಿ | ದಿರಬಲ್ಲೆವೆ ಜೀವಿಸಿ? ಹಾಯ್ ಹಾಯ್ ! || ೪ || ಎಲ್ಲಿದೆ ಬಲ? ನಿಮ | ಗೆಲ್ಲಿದೆ ಚಲ? ನಿಮ | ಗೆಲ್ಲಿದೆ ಗಂಡಸುತನ ನಿಮಗೆ? || ಎಲ್ಲಿದೆ ಕುಲ? ನಿಮ | ಗೆಲ್ಲಿದೆ ನೆಲ? ನಿಮ | ಗೆಲ್ಲಿ ನಿಮಗೆ ರಾಜತ್ವವು? ಹಾಯ್ | || ೫ ||

ಆಗ ಬುಕ್ಕನು ಹೆಂಡತಿಯನ್ನು ಶ್ಲಾಘಿಸಿದ್ದು—

ಕಂ॥ ಹೊನ್ನೆಂಬರ್ಜಿತವಾಗಿಹ | ಹೊನ್ನಂ ಜನರೆಲ್ಲ ತಿಳಿಯದೆಯೆ ಅದರಿರವಂ; ॥ ಹೊನ್ನಿ, ನಿನ್ನಂಥ ಹೆಣ್ಣೇ | ಹೊನ್ನೇ ಕರ್ಣಾಟಕಕ್ಕೆಸುತ್ರಾತನರಿವೆಂ ॥
—(ವಿ. ಕಾ)

ಹೀಗೆಂದು ಹರಿಹರಬುಕ್ಕರು ಆನೇಗೊಂದಿಯ ಜಂಬುಕೇಶ್ವರನ ಸಹಾಯಕ್ಕೆ ಹೊರಡುವದರೊಳಗಾಗಿ—

ಕೀ॥ ಆನೇಗೊಂದಿಯ ಜಂಬುಕೇಶ್ವರನು | ಮಾಣದೆ ಸತಿಸುತರನು ಸುಟ್ಟು ॥ ತಾನು ಬೆಂಕಿಯನು ಕೂಡಿ ಮಲಗಿದನು | ಮಾನಿತನೀ ಕ್ಷೋಣಿಯ ಬಿಟ್ಟು ॥

ಆಗ ಮುಂದೇನುಮಾಡಬೇಕೆಂದು ತೋರದೆ ಬುಕ್ಕನು ಹರಿಹರನಿಗೆ ಹೇಳಿದ್ದು—

ಭೋ॥ ಅಣ್ಣಾ, ಕೇಳು; ನನಗೆ ತೋರ್ಪುದಿನ್ನು ಮಾಧವಾಖ್ಯಮುನಿಯ | ಮುನ್ನ ನಾವು ಸೇವಿಸಿರ್ಪೆವಲ್ತೆ | ಇಲ್ಲಿಯೆ; ॥ ಇನ್ನು ಶೃಂಗಪುರಿಗೆ ಪೋಗಿ | ಬಿನ್ನ ಬೀಳಲವರೆ ಕರುಣ | ವನ್ನು ತೋರುತೆಮ್ಮ ಪೊರೆಯದಿರರು ಮುದದಲಿ ॥

ಹೀಗೆಂದು ಅವರು ಶೃಂಗೇರಿಗೆ ಹೋಗಿ ಆಗ ಅಲ್ಲಿದ್ದ ಶ್ರೀ ವಿದ್ಯಾತೀರ್ಥಸ್ವಾಮಿಗಳ ಮುಂದೆ ತಮ್ಮ ಗೋಳನ್ನು ಹೇಳಿಕೊಳ್ಳುತ್ತಲಿ ಅವರ ಮನಸ್ಸು ಕರಗಿಹೋಗಿದೆ—

ಶ್ಲೋ॥ ಸಜ್ಜನಸ್ಯ ಹೃದಯಂ ನವನೀತಂ | ಯದ್ವದಂತಿ ಕವಯಸ್ತದಳೀಕಮ್; ॥ ಅನ್ಯದೇಹವಿಲಸತ್ಪರಿತಾಪಾ | ತ್ಸಜ್ಜನೋ ದ್ರವತಿ ನೋ ನವನೀತಮ್ ॥
—(ಸು)

ಅ॥ ಸಜ್ಜನರ ಹೃದಯವು ಬೆಣ್ಣೆಯಂತಿರುವದೆಂದು ಕವಿಗಳು ಹೇಳುವುದು ಸುಳ್ಳು. ಮತ್ತೊಬ್ಬರಿಗೆ ತಾಪವಾದರೆ ಸಜ್ಜನರು ಕರಗುತ್ತಾರೆ. ಬೆಣ್ಣೆ ಹಾಗಲ್ಲ—

ಆಗ ಅವರು ಮನಸ್ಸಿನಲ್ಲಿ ಯೋಚಿಸಿದ್ದು—

ಶ್ಲೋ॥ ಯದಚೇತನೋಽಪಿ ಪಾದೈಃ | ಸ್ಪೃಷ್ಟಃ ಪ್ರಜ್ವಲತಿ ಸವಿತುರಿನಕಾಂತಃ; ॥ ತತ್ತೇಜಸ್ವೀ ಪುರುಷಃ | ಪರಕೃತನಿಕೃತಿಂ ಕಥಂ ಸಹತೇ ? ॥
—(ಸು)

ಅ॥ ಸೂರ್ಯಕಾಂತಶಿಲೆಯು ಜಡವಾದರೂ ಸೂರ್ಯನ ಪಾದಗಳಾದ ಕಿರಣಗಳು ತಾಕುತ್ತಲಿ ಉರಿಯುತ್ತದೆ. ಹೀಗಿರುವಾಗ ತೇಜಸ್ವಿಯಾದ ಮನುಷ್ಯನು ಮತ್ತೊಬ್ಬರು ಮಾಡುವ ಅವಮಾನವನ್ನು ಹೇಗೆ ತಡೆದುಕೊಂಡಾನು !

ಹೀಗೆ ಯೋಚಿಸಿ ಅವರಿಗೆ ನೆರವಾಗಿ ದೇಶೋದ್ಧಾರವನ್ನೂ ಅದರ ಮೂಲಕ ಧರ್ಮೋದ್ಧಾರವನ್ನೂ ಮಾಡಿ ತಮಗೆ ಆ ಗುರುದಕ್ಷಿಣೆಯನ್ನು ಮುಟ್ಟಿಸುವಂತೆ ಶ್ರೀ ವಿದ್ಯಾತೀರ್ಥರು ಆಜ್ಞೆಮಾಡುತ್ತಲಿ ಮಾಧವನು ಬಳಿಯಲ್ಲಿಯೇ ಇದ್ದ ಸಾಯಣನೆಂಬ ತಮ್ಮನಿಗೆ ಹೇಳಿದ್ದು—

ದ್ವಿ॥ ಏಳು ಸಾಯಣ, ಶರಣಜನರ ಪೊರೆವುದಕೆ; | ಏಳು ಭೂದೇವಿಯನು ಸೇವೆಗೈವುದಕೆ; ॥

ಎಂದು ಅವರಿಗೆ ನೆರವಾಗಿ ಹೊರಟು ಅಭಯವನ್ನು ಕೊಟ್ಟು ಹೇಳಿದ್ದು—

ಕಲ್ಯಾಣಿ—ಆದಿತಾಳ

ಹೊಡಿ ನಗಾರಿ ಮೇಲೆ ಕಯ್ಯ | ಆನಂದವುದನೇರಿ ಮಯ್ಯ || ಖಡಖಡ || ಪ || ಮೃಡವಂದಿತಪದ | ದೃಢದಿ ಭಜಿಸುವರ | ಬಿಡದೆ ಕಾಯ್ವ ಜಗ | ದೊಡೆಯ ಶ್ರೀಹರಿಯೆಂಧೊಡೀ || ೧ || ವೇದಗಮ್ಯ ಸಕಲಾರ್ತಿನಿವಾರಕ | ಮೋದವೀವ ಮಧುಸೂದನ ಧೊರೆಯೆಂ || ೨ || ಗಾನಲೋಲ ತನ್ನ ಧ್ಯಾನಿಸುವರಿಗೆಲ್ಲ | ಮಾನದಿಂದ ಕಾಯ್ವ ಶ್ರೀನಿಧಿಪರಮನೆಂ || ೩ || ನಿಷ್ಠೆಯಿಂದಲಿ ಮನ ಮುಟ್ಟಿ ಭಜಿಸುವರ | ಕಷ್ಟವ ಕಳೆವ ಶ್ರೀಕೃಷ್ಣನು ಪರನೆಂ || ೪ || ಈ ಪೃಥಿವಿಯೊಳಗೆ ವ್ಯಾಪಕನಾಗಿಪ್ಪ | ಶ್ರೀಪತಿ ಪುರಂದರವಿಠಲನು ಧಣಿಯೆಂ || ೫ || —(ದಾ)

ಪಂಪಾಕ್ಷೇತ್ರಕ್ಕೆ ಬರುತ್ತಲೀ ಮಾಧವನು ಹರಿಹರನಿಗೆ ಹೇಳಿದ್ದು—

ವೃ|| ಹರಿಹರ, ಹೋಗು; ನಂಬಿಗೆಯ ಪೇಳ್ಮನುಜರ್ಗೆ; ವರಾಹಚಿತ್ರಮಂ | ಬರೆದಿಹ ಪೂರ್ವಿಕಧ್ವಜಮನೆತ್ತುತೆ ಹಾಡುತೆ ರಾಷ್ಟ್ರಗೀತೆಯಂ || ಭರದೊಳೆ ಸಾರಿ ಪೇಳ್ವುದಕೆ ಮುಂದಿನ ಮಂಗಲವಾರವೆಲ್ಲಮಿಂ | ದರೆಯ ಸದಾಬ್ಜಯುಗ್ಮಗಳುಪಾಸನೆಯಾಗೆ ವಿಶೇಷಮಾಗಿ ತಾಂ || —(ಗಿ. ಕಾ)

ಹೀಗೆ ಮುಂದಿನ ಕೆಲಸವನ್ನು ಹೇಳಿ ಮಾಧವನು ಧನಾನುಕೂಲಕ್ಕಾಗಿ ತಪಸ್ಸಿಗೆ ಕುಳಿತು ಭುವನೇಶ್ವರಿಯನ್ನು ನುತಿಸಿದ್ದು—

ತೋಡಿ—ಆದಿತಾಳ

ಶ್ರೀಶೈಲಸಂಭವೆ, | ಸುವೈಭವೆ, | ನಮಿಸುವೆ ನಿತ್ಯೋತ್ಸವೆ, ಭವೆ || ಪ || ಧೀರೆ, | ಧೀರಾಶ್ರಿತೆ, ಗಹನವಿಚಾರೆ, | ಚಾರಾಳಿವಿನುತೆ, ಗುಣಾಹಾರೆ, | ಹಾರಾಳಿಸಹಿತೆ, ಭವದೂರೆ, || ದೂರಮಾಡುತೆನ್ನಯ ದುಷ್ಕೃತಿಗಳ | ಪಾರುಮಾಡು ಶರಣಾಗತರನು ನೀಂ || ೧ || ಕಾಲೀ, | ಕಾಲಾಬ್ದರುಚಿರಕೇಶಾಳೀ, | ಆಳೀಕೃತಶುಭಗುಣಶಾಲೀ, | ಸಾಲಾಯುತಭುಜಶಿವಕೇಳೀ, || ಕೇಳಿ ಶರಣಜನಜಾಲದ ಬಯಕೆಯ | ಪಾಲಿಸು ಕರುಣದಿ ಶ್ರೀಲಲಿತಾಂಬಿಕೆ || ೨ || ದುರ್ಗೇ, | ದುರ್ಗಾಲಯೆ, ನತಸುರವರ್ಗೇ, | ವರ್ಗೀಕೃತನಿಜಸುಖಭರ್ಗೇ, | ಭರ್ಗಾನುಗ್ರಹಕೃತಮಾರ್ಗೇ, || ಮಾರ್ಗವ ತೋರಿಸಿ ಶೀಘ್ರದಿ ಮೋಕ್ಷಪ | ವರ್ಗವನೀಡುವ ಚಿದ್ಘನಾತ್ಮಳೀ ||

ಆಗ ಪರಾರ್ಥವಾಗಿ ಬಯಸುವ ಐಶ್ವರ್ಯಕ್ಕೆ ಪ್ರಾಚೀನಕರ್ಮದ ಸಂಬಂಧವಿಲ್ಲವೆಂದು—

ಕಂ|| ಬಿಡದೊಂದು ಮುಹೂರ್ತಂ ಕ | ಣ್ಬಿಡೆ ಲಕ್ಷ್ಮೀದೇವಿ ಜನರಿದಚ್ಚರಿಯೆಂಬೊಲ್ || ಬಡಿವಾರದ ಮಳೆಯಾಗಿರೆ | ಬಿಡದಾದತ್ತದರ ಕೀರ್ತಿ ನಿಂತಿರಲನಿಶಂ ||

ಅದನ್ನು ಕವಿ ವರ್ಣಿಸುವದು—

ವೃ|| ಬೆಳೆಗಳ ಸುಗ್ಗಿಯಾಗಿ ಜನರೊಳ್ಧನಸಂಪದಮುಪ್ಪುದೆಂದೊ ಮೇ | ಣ್ಪೊತ್ತಳೆದಿಹ ಕಲ್ಗಳಲ್ಲಿ ಮಿನುಗುತ್ತಿಹ ಚಿನ್ನದ ಕಾಂತಿಯಿಂದಮೋ || ಅಳತೆಗೆ ಬಾರದಷ್ಟು ನಿಧಿ ಮೇಗಡೆಗೆದ್ದುದರಿಂದಮೇನೊ ಆ | ಮಳೆಯ ಸುವರ್ಣವೃಷ್ಟಿ ಯೆನುತೆಲ್ಲರುವಿರಾಕ್ಷಿಸಿ ಪೇಳ್ದರೆಲ್ಲಿಯುಂ || — (ವಿ. ಕಾ)

ಆಗ ಒಂದು ಚಮತ್ಕಾರವಾದ ಸಂಗತಿ ನಡೆದದ್ದೇನೆಂದರೆ—

ಭಾ|| ತೊಗಲಖನು ಸರಹತ್ಯಪಧಿಯನು | ಮುಗಿಸಿ ಮಲಗಿರಲವನ ಕನ ಸಿನ | ಬಗೆಗೆ ಬಂದು ಮಹಮ್ಮದನು ಮೇಣವನೆದೆಯ ಮೆಟ್ಟಿ || ಜಗದಿ ಸನ್ನ ಭಿಮತವ ತಿಳಿಯದೆ | ಹಗರಣವ ಸೀಗೈದೆಯೆಲೊ ಹಿಂದೆಗೆಯೊ ದಕ್ಷಿಣದಿಂದ ಲೆಂದನು ಕೋಪಿಸುತ ಜಟ್ಟಿ ||

ಆಗ ತೊಗಲಖನು ದಕ್ಷಿಣಕ್ಕೆ ಹೋಗಿದ್ದ ತನ್ನ ದಂಡನ್ನೆಲ್ಲ ಹಿಂದಕ್ಕೆ ಕರೆಸಿಕೊಂಡಿದ್ದಾನೆ. ಪ್ರಜೆಗಳಿಗೆಲ್ಲ ಮಾಡಿದ ಹಾನಿಯು ಹೇಗೆ ಆ ಅಧಿಕಾರಕ್ಕೆ ನಾಶವನ್ನುಂಟುಮಾಡದೆ ಬಿಟ್ಟೀತು?

ಶ್ಲೋ|| ಪ್ರಜಾಪೀಡನಸಂತಾಪಾತ್ಸಮುದ್ಭೂತೋ ಹುತಾಶನಃ | ರಾಜ್ಞಃ ಶ್ರಿಯಂ ಕುಲಂ ಪ್ರಾಣಾನದಗ್ಧ್ವಾ ವಿನಿವರ್ತತೇ || —(ಸು)

ಅ|| ಪ್ರಜೆಗಳನ್ನು ಪೀಡಿಸಿದ್ದರಿಂದ ಉಂಟಾದ ಬೆಂಕಿಯು ರಾಜನ ಐಶ್ವರ್ಯವನ್ನೂ ಕುಲ ವನ್ನೂ ಪ್ರಾಣಗಳನ್ನೂ ಸುಟ್ಟು ಬೂದಿಮಾಡದೆ ಏಕೆ ಬಿಟ್ಟೀತು !

ಇತ್ತ ಜಗತ್ತಿನಲ್ಲಿ ಏಕಮತ್ಯವನ್ನು ಹುರಿಗೊಳಿಸುವುದಕ್ಕೆ ಹೋಗಿದ್ದ ಹರಿಹರಬುಕ್ಕರು ಬಂದೊಡನೆ ಮಾಧವನು—

ಕೀ|| ವಿಜಯಾದೇವಿಯ ನಿಲಯಮಾಗಿ ಮೇಣ್ | ವಿಜಯಧ್ವಜನಿರ್ಮಿತ ವಾದ || ವಿಜಯನಗರದೊಳು ಪಟ್ಟಗಟ್ಟಿದನು | ವಿಜಯಶೀಲರನು ಮುದದಿಂದ||

ಜನರೆಲ್ಲರೂ ಹರಿಹರಬುಕ್ಕರ ಆಳಿಕೆಯನ್ನು ಗೌರವಿಸಿದ್ದು—

ಕಂ|| ಜನರಂಜನವೆಂದೆನಿಸುವ | ಜನಪಾಲಕಪದವಿಯೊಲವನಾಶಿಸದವ ರಾರ್? || ಜನರಂಜನವೆಂದೆಣಿಸದ | ಜನಪಾಲಕಪದವಿಯೊಲವ ನಾಶಿಸಿದವರಾರ್ ||

—(ವಿ. ಕಾ)

ಆಗ ಜನರೆಲ್ಲರೂ ದೇಶಾಭಿವೃದ್ಧಿಗಾಗಿ ಕಾಣಿಕೆಯನ್ನು ತಂದೊಟ್ಟಿದ್ದು—

ಕಂ|| ಉತ್ತರದೊಳೊಂದೆ ಮೇರುವ | ದೆತ್ತಲೊ ಲೋಕದೊಳಗಾವನುಂ ಕಂಡಿಲ್ಲಂ ; || ಇತ್ತ ಧನರಾಶಿಯಿಂದೆ | ತ್ತೆತ್ತಲುಮುಪರಿಮಿತಮೇರುಗಳ ಹೊರ ತಿಲ್ಲಂ || —(ವಿ.ಕಾ)

ಆಗ ಆದ ಜಯಜಯಕಾರ—

ವೃ|| ಹರಿಹರಭೂಮಿಪಾಲ ; ಜಯ ! ಭೋ ಹರಿಯಪ್ಪೊಡೆಯಾ, ಜಯಂ ಜಯಂ ! | ಧರಣಿಯ ರಾಜರಾಜನೆ, ಜಯಂ ! ಧರಣೀತಲಮಂಡಲೇಶ್ವರಾ, || ನರಪತಿಮೌಳಿಭೂಷಿತಪದದ್ವಯ, ಧಾರ್ಮಿಕಚಕ್ರವರ್ತಿಯೇ, | ವರಮುನಿದತ್ತ ಸಿರ್ಭಯ, ಚಿರಂ ಜಯಿಸೆಂದುದು ವಂದಿಸಂಕುಲಂ || —(ವಿ. ಕಾ)

ಹೀಗೆ ಆದ ಸ್ವರಾಜ್ಯಸ್ಥಾಪನೆಯಲ್ಲಿ ವಿಶೇಷವೇನೆಂದರೆ—

ರ|| ದೇಶವನೆಲ್ಲವ ಗೆಲಬೇಕೆಂದು | ಗಾಸಿಗೊಳಿಸಲಿಲ್ಲೊಬ್ಬರನಂದು | ರಣವನು ಮಾಡುವ ಸಿದ್ಧತೆಯಿಲ್ಲ | ಜನಮಂಡಲಿಯಲಿ ಕ್ಷುಬ್ಧತೆಯಿಲ್ಲ | ರಾಯಭಾರಿಗಳ ತಂತ್ರಗಳಿಲ್ಲ | ಬಾಯ್ಬಾಯ್ಬಿಡಿಸುವ ಯಂತ್ರಗಳಿಲ್ಲ | ಪರಜನರೊಳಗಸಹನದಿಂದಲ್ಲ | ಪರಜನರನು ಪೀಡಿಸಲೆಂದಲ್ಲ ||

ಮತ್ತೇತರಿಂದ? ಎಂದರೆ—

ರ|| ಕೃತ್ಯಾಕೃತ್ಯವನರಿಯದ ಜನರ | ಅತ್ಯಾಚಾರವ ಮಾಡುತ ದೂರ | ಸ್ವಮತಾಚಾರವ ರಕ್ಷಣೆಮಾಡಿ | ಸಮತೆಯಿಂದಿರಲು ಜನರೊಡಗೂಡಿ ||

ಆಗ ಮಾಧವನು ಹರಿಹರನಿಗೆ ಆಳಿಕೆಯದೊಂದು ಒಳಗುಟ್ಟನ್ನು ಹೇಳಿದ್ದು—

ತ್ರಿ|| ದುರಿತಗಳ ಬಿಡಲವರ ಪೊರೆವ ಹರನಂದದಿಂ | ಶರಣೆಂದ ಜನರ ದುರಿತವನು ಮರೆಯುತ್ತ | ಪೊರೆಯಲೀಬೇಕು ನಿಜವಾಗಿ ||

ಅದರಂತೆ ಸುತ್ತಮುತ್ತಣ ಮುಸಲ್ಮಾನರಾಜರೊಡನೆಯೂ ಗೆಳೆಯತನವನ್ನು ಬೆಳೆಸಿಕೊಂಡು ತನ್ನ ಊರ್ಜಿತಸ್ಥಿತಿಗಾಗಿ ಕೆಲವುದಿನದ ಪ್ರಭುತ್ವವನ್ನು ಮಾಡಿಯೇ ತೋರಿಸಬೇಕೆಂದು ಹರಿಹರನು ಬೇಡಿಕೊಂಡದ್ದರ ಮೇಲೆ ಅವನ ಮಂತ್ರಿಯೆನಿಸಿಕೊಂಡು ಮಾಧವನು—

ಸಾ|| ಎರಡುಕರದೊಳುಂ ಕತ್ತಿಯ ತಿರುಹುವ | ಪರಿಯನು ತೋರಿಸುವಂತೆ || ಪರಮಾರ್ಥಪ್ರಪಂಚಗಳ ನಡೆಸಿದನು | ಧರೆಯಚ್ಚರಿಯೆಂಬತೆ ||

ಅವನ ಮಂತ್ರಿತ್ವವನ್ನು ಒಬ್ಬ ಕವಿ ವರ್ಣಿಸಿರುವದೆಂತೆಂದರೆ—

ಶ್ಲೋ|| ಇಂದ್ರಸ್ಯಾಂಗಿರಸೋ, ನಲಸ್ಯ ಸುಮತಿಃ, ಶೈಬ್ಯಸ್ಯ ಮೇಧಾತಿಥಿ | ಧೌಮ್ಯೋ ಧರ್ಮಸುತಸ್ಯ, ವೈನ್ಯನೃಪತೇಃ ಸ್ವೌಜಾ, ನಿಮೇರ್ಗೌತಮಃ,|| ಪ್ರತ್ಯಗ್ದೃಷ್ಟಿರರುಂಧತೀಸಹಚರೋ ರಾಮಸ್ಯ ಪುಣ್ಯಾತ್ಮನಃ, | ಯದ್ವತ್ತಸ್ಯ ವಿಭೋರಭೂತ್ಕುಲಗುರುರ್ಮಂತ್ರೀ ತಥಾ ಮಾಧವಃ || —(ಸು.)

ಅ|| ಇಂದ್ರನಿಗೆ ಬೃಹಸ್ಪತಿಯೂ ನಲನಿಗೆ ಸುಮತಿಯೂ ಶೈಬ್ಯನಿಗೆ ಮೇಧಾತಿಥಿಯೂ, ಧರ್ಮರಾಯನಿಗೆ ಧೌಮ್ಯನೂ ವೈನ್ಯನಿಗೆ ಸ್ವೌಜನೂ ನಿಮಿಗೆ ಗೌತಮನೂ ಪುಣ್ಯಾತ್ಮನಾದ ರಾಮನಿಗೆ ವಸಿಷ್ಠರೂ ಇದ್ದಂತೆ ಹರಿಹರನಿಗೆ ಕುಲಗುರುವಾದ ಮಾಧವನು ಮಂತ್ರಿಯಾದನು.

ಅವನ ರಾಜ್ಯಭಾರದ ವಿಚಕ್ಷಣೆ—

ರ|| ಧರ್ಮಾಭಿಮಾನಮುಂ ದೇಶಾಭಿಮಾನಮುಂ ಪೇರ್ಮೆಯಿಂದೊಂದೊಂದನಾಲಿಂಗಿಸಿರುವಂತೆ | ಗಿರಿಜೆಯುಂ ಲಕ್ಷ್ಮಿಯುಂ ನೆಲಸಿರ್ದ ಸ್ಥಲದಲ್ಲಿ ಸರಸತಿಯು ಬಂದು ತಾಂಡವವಾಡುತಿರ್ಪಂತೆ | ಭೂಸುರರ್ಕಳು ಸ್ವಾರ್ಥಬುದ್ಧಿಯುವರೆಂದೆಂಬ ದೂಷಣೆಗದೆಲ್ಲಿಯುಂ ಸ್ಥಲವಿಲ್ಲದಿರ್ಪಂತೆ | ಜೈನಲಿಂಗಾಯತಪ್ರಮುಖರಿಗೆ ರಾಜ್ಯದಲಿ ಕೈನೆರವಿನಧಿಕಾರಗಳನಿತ್ತು ತೋಷದಲಿ | ದೇಶಭಾಷೆಯ ಪ್ರಸಾರವನು ಹೆಚ್ಚಿಸಿ ಮತ್ತೆ ದೇಶವತ್ಸಲತೆಯನ್ನಭಿವೃದ್ಧಿಗೈವುತ್ತೆ | ವೇದಗಳಿಗೆಲ್ಲ ಭಾಷ್ಯವ ಮಾಡಿ ಪ್ರಜೆಗಳೊಳು | ಭೇದಬುದ್ಧಿಯ ಕಳೆದು ಪೊರೆದನತಿಮೋದ

ದೊಳು । ಶಿಲ್ಪ ಮೊದಲಾದ ಕಲೆಗಳನೆಲ್ಲ ಬೆಳೆಸಿದನು ಕಲ್ಪಾಂತವುಂ ನೋಡು ತಿರ್ಪಂತೆ ಧರೆಯುಪರು ||

ಈ ಪ್ರಕಾರಯುಶಸ್ಸು ಹಂಡಿರುವಾಗ—

ಕಂ|| ವೇದೋದ್ಧಾರಂಗೆಯ್ದುರ । ಲಾದುದು ಬಿರುದಾಗ ಸರ್ವಸಮ್ಮತಿ ಯಿಂದಂ || ಮೋದಿಸಿಯ ವಿಪ್ರವರಸಹ। ಮಾಧವನಾಚಾರ್ಯರೆಂದು ಬಹುಮತಿ ಯಿಂದಂ ||

ಮಾಧವನು ದೇಶೋದ್ಧಾರವನ್ನೂ ಧರ್ಮೋದ್ಧಾರವನ್ನೂ ಕೂಡಿ ಮಾಡಿದ್ದನ್ನು ಕವಿ ವರ್ಣಿಸಿರುವ ದೇನೆಂದರೆ—

ಕಂ|| ವೇದವ ಮೊದಲುದ್ಧರಿಸುತೆ । ಮೋದಿಸಿದ ಬಳಿಕ್ಕಮೆತ್ತೆ ಮಾಧವ ನಾಗಳ್ || ವೇದೋದ್ಧಾರದ ಜೊತೆಯೊಳೆ। ಮೋದಿಸಿಯುಂ ಪೊರೆದನಲ್ತೆ ಮಾಧವ ಸೀಗಳ್ || —(ವಿ. ಕಾ)

ಆಗ ಶಂಕರಾಚಾರ್ಯರ ಹೃದಯವನ್ನು ಒಳಹೊಕ್ಕು ನೋಡಿದ್ದರೆ ಏನುಕಾಣುತ್ತಿತ್ತೆಂದರೆ—

ದ್ವಿ|| ವೇದಾಂತವೊಂದರೊಳೆ ಬರೆದಿದ್ದೆನಾಗ । ವೇದಶಾಸ್ತ್ರಾದಿಗಳ ಪುಗಿ ಸಿರ್ಪನೀಗ || ಮಗನಿಂದ ಜಿತನಾದ ಪಿತನಂತೆ ನಾನು । ಎಂಗೆ ಶಿಷ್ಯನಿಂದ ಜಿತ ನಾದೆನಿನ್ನೇನು || ಇಂದಿಗೆನ್ನುದ್ದೇಶ ಸಫಲವಾಗಿಹುದು । ಸಂದೇಹವೇಂ ತಕ್ಕ ಶಿಷ್ಯನಿವನಹುದು ||

ಆ ಕಾಲದ ದೇಶದ ಏಳಿಗೆ ಹೇಗಿತ್ತೆಂದರೆ—

ರ|| ಬೆಳೆಯಿತು ಹಂಪೆಯು ಚಂದ । ಜನ। ರೊಳಗೆ ವಿಹಾರಿತಾನಂದ || ಪ || ಹನ್ನೆರಡುಂ ಗಾವುದ ಸುತ್ತಳತೆ । ಇನ್ನೂ ಬೆಳೆಯಿತು ವಿಹಾರಿತ ಜನತೆ । ಏಳು ಸುತ್ತಿನತಿಭದ್ರದಕೋಟೆ । ಹೇಳಲದಕೆ ಸಮನಿನ್ನೊಂದುಂಟೆ । ದಿವ್ಯವಾಗ ಬೀದಿಯ ಸಾಲುಗಳು। ಭವ್ಯವಾದ ಗುಡಿಗಳ ಗೋಪುರಗಳು । ತಿಳಿನೀರ ಸರೋ ವರರಾಜಿಗಳು । ಬೆಳೆದ ಕಬ್ಬು ಭತ್ತಗಳೋಜೆಗಳು। ಶ್ರೀಮಂತರ ಮಂದಿರಮಾ ಲೆಗಳು । ಧೀಮಂತರ ವಿದ್ಯಾಶಾಲೆಗಳು । ಎಲೆಲ್ಲಿಯು ನವರತ್ನದಂಗಡಿ । ಬಲ್ಲಿ ನೆಂದು ಪೇಳುವಡೆಲ್ಲಿದೆ ನುಡಿ?। ಹತ್ತು ಗಜಗಳುದ್ದದ ಸಿಂಹಾಸನ । ಕೆತ್ತಿದ ನವ ರತ್ನಗಳ ವಿಭೂಷಣ । ಗೋಡೆಗಳಿಗೆ ಚಿನ್ನದ ತಗಡುಗಳು । ನಾಡಿನ ನೆನಪುಗೊ ಡುವ ಬೆಡಗುಗಳು ||

ಆಗಿನ ಸ್ಥಿತಿಯನ್ನು ಕವಿ ವರ್ಣಿಸಿರುವದೇನೆಂದರೆ—

ಸಾಂ|| ಕಾವೇರಿಯಿಂದ ಗೋದಾವರಿವರೆಗವಿ । ದರ್ಪ ವಸುಧಾತಲವ ಲಯು || ಭಾವಿಸೆ ಕರ್ಣಾಟಕಜನಪದವದ । ನಾವನೊಲಿದು ಬಣ್ಣಿಸುವನು? || ೧ || ವೀರರಲ್ಲದೆ ಹಂದೆಗಳು, ವಿತರಣಗುಣ । ಶೂರರಲ್ಲದೆ ಲೋಭಿಗಳು, || ಸಾರಗುಣಗ್ರಾಹಿರಸಿಕರಲ್ಲದೆ ದುರ್ಪಿ । ಕಾರಿಗಳಿಲ್ಲಾ ನೆಲದೊಳು || ೨ || ಆದು

ವರಿಲ್ಲನೃತವ, ನಾಚಿ ರಂಗದೊ | ಳೋಡುವರಿಲ್ಲೆರೆದುಡನು || ಕೂಡಿ ಕೊಡದ ರಿಲ್ಲಾ ನಾಡ ಮನುಜರ | ಗಾಡಿಯನೇನ ಬಣ್ಣಿಪೆನು ! || —(ಹ. ಥ)

ಈ ಪ್ರಕಾರ ಮಾಧವನು ಧರ್ಮಕ್ಕಾಗಿ ಸ್ವರಾಜ್ಯಸ್ಥಾಪನೆಯನ್ನು ಮಾಡಿ ಶೃಂಗೇರಿಗೆ ಹೋಗಿ ಸಂನ್ಯಾಸವನ್ನು ಸ್ವೀಕರಿಸಿ ಶ್ರೀವಿದ್ಯಾರಣ್ಯರೆಂಬ ಹೆಸರಿನಿಂದ ಜಗದ್ಗುರುಪೀಠದಲ್ಲಿ ಕುಳಿತು ಕಾಶಿಯ ವರೆಗೂ ದಿಗ್ವಿಜಯವನ್ನು ಮಾಡಿ ಇನ್ನೂ ಲೋಕೋತ್ತರವಾದ ಕಾರ್ಯಗಳಲ್ಲಿ ಮಗ್ನನಾಗಿರಲು ಒಂದು ದಿನ ಸ್ವಪ್ನದಲ್ಲಿ ಒಬ್ಬ ದೇವಪುರುಷನು ಬಂದು ಹೇಳಿದ್ದು—.

ಕೀ|| ಗುರುವರ, ಕೇಳೀ ಮನುಜರಾಯುಷ್ಯದ ಪರಮಾವಧಿ ಸೂರಿಪ್ಪತ್ತು|| ಪರಿಪೂರ್ಣತೆಯಾಯಿತು ನಿಸ್ಸಂಶಯ ಕೃತಿ | ನೆನಪುಗೊಡುವೆ ನಿನಗಿದು ಗೊತ್ತು ||

ಆ ವೇಳೆ

ಸಾ|| ಕ್ಷಯವತ್ಸರದಾ ಜ್ಯೇಷ್ಠ ಬಹುಳದಲಿ | ತ್ರಯೋದಶಿಯ ತಿಥಿಯೊಳ್ || ಸುಯಶಸ್ವಿಗಳು ಸಮಾಧಿಯ ಪಡೆದರು | ಜಯವೆನೆ ದೇವತೆಗಳ್ ||

ಶ್ರೀವಿದ್ಯಾರಣ್ಯರು ಹೀಂಗೆ ಕೃತಾರ್ಥರಾದದ್ದನ್ನು ನೋಡಿ ಭಾಗವತಶಿರೋಮಣಿಗಳು ಕೀರ್ತನಾರಂಭದಲ್ಲಿ 'ಮರೆಯದಿರಲೆ ಮನವೆ' ಎಂದು ಮುಂತಾಗಿ ಉಪದೇಶಿಸಿರುವರು.

---

# ಮೀರಾಬಾಯಿ

## ಪೀಠಿಕೆ–ಕೀರ್ತನ

ಕಾಂಬೋದಿ—ಝಂಪೆ

ಕೀರ್ತನದ ಸವಿಯನನುಭವಿಸಿನೋಡು || ಪ || ಆರ್ತಿಗಳನೆಲ್ಲ ಬಹುದೂರಕೆ ಬಿಸಾಡು || ಅ. ಪ || ತನುವು ತಾನೆಂದೆಂಬುವಭಿಮಾನವನ್ನು ಬಿಡು ;| ಮನವನ್ನು ಶ್ರೀಹರಿಯ ಚರಣದೊಳಿಡು ; || ಅಸಿತುಸುಖದುಃಖಗಳ ಸಮನೆಂದು ನೋಡುತ್ತ | ಜನನಮರಣವ ಕಳೆದು ಸುಖದೊಳೋಲಾಡು ||

ಜಗತ್ತಿನಲ್ಲಿ ದೇವರ ಕಡೆಯ ಲಕ್ಷ್ಯವೇ ಇಲ್ಲದಿರುವ ಜನರ ವಿಷಯದಲ್ಲಿ ಜ್ಞಾನಿಗಳು ಅಭಿಪ್ರಾಯಪಟ್ಟಿರುವದೇನೆಂದರೆ—

—ಝಂಪೆ—

ವೃ|| ಹೊನ್ನನ್ನು ನೆನೆನೆನೆಸಿಯುತದಕಾಗಿಯೇ ಧರಣಿ–ಯನ್ನಗೆದು ಹುಡುಕುತಿಹರು ; | ಬಿನ್ನಣದಿ ಸಿರಿಯನ್ನು ಮರೆಸುತಿಹ ಸೊಗಸಾದ–ಹೆಣ್ಣಿಗೇ ಕೊರ

ಗುತಿಹರು; ॥ ಇನ್ನೀ ವಸುಂಧರೆಯೊಳಗೆ ನಿನ್ನ ನೆನೆನೆನೆದು-ಮುನ್ನ ಕೀರ್ತನೆಗೆಯ್ಯದ । ಕುನ್ನಿಗಳು ಲುಬ್ಧಜನರಿದ್ದೇನು ಫಲ? ಜಗ-ನ್ಮಾನ್ಯನೇ, ಪಿತಾಂಬರ ॥ —(ಹ. ಹಂ)

ದೇವರ ಪೂಜೆಗೆ ಉಪಯೋಗಿಸದಿರುವ ಅವಯುವಗಳನ್ನು ದೊಡ್ಡವರು ನಿಂದಿಸಿರುವದೇನೆಂದರೆ—

ಶ್ಲೋ॥ ಭಾರಂ ಪರಂ ಪಟ್ಟಕಿರೀಟಜುಷ್ಟ । ಮುಪ್ಯುತ್ತಮಾಂಗಂ ನ ನಮೇನ್ಮುಕುಂದಮ್; ॥ ಶಾವೌ ಕರೌ ನೋ ಕುರುತಃ ಸಮರ್ಚಾಮ್ । ಹರೇರ್ಲಸತ್ಕಾಂಚನಕಂಕಣೌ ವಾ ॥ —(ಸು)

ಅ॥ ಒಳ್ಳೆ ಕಿರೀಟವನ್ನಿಟ್ಟುಕೊಂಡಿರುವ ತಲೆಯಾದರೂ ವಿಷ್ಣುವಿಗೆ ಎರಗದಿರುವ ತಲೆಯು ಬರೀ ಭಾರ ಮಾತ್ರ. ಒಳ್ಳೆಯ ಚಿನ್ನದ ಬಳೆಗಳನ್ನಿಟ್ಟ ಕೈಗಳಾದರೂ ಹರಿಯು ಪೂಜೆಯನ್ನು ಮಾಡದಿರುವ ಕೈಗಳು ಹೆಣದ ಕೈಗಳು.

ಈ ಪ್ರಕಾರ ದೇವನ ಕಡೆಗೆ ಲಕ್ಷ್ಯವನ್ನಿಡುವ ಉದ್ಯೋಗವನ್ನಾದರೂ ಮುಪ್ಪಿಗೆ ತಕ್ಕದ್ದೆಂದು ಮುಂದಕ್ಕಿಟ್ಟುಕೊಳ್ಳಬಾರದು. ಏಕೆಂದರೆ—

ಕಂ॥ ಎಂದಿಂಗಮೆಮಗೆ ಸಾವಿ । ಲ್ಲೆಂದಿರ್ಪ ಜರಾಮರರ್ಕಳಂತಿರೆ ಬೆರೆತಿ ॥ ರ್ಪಂದಮುದು ಪೊಲ್ಲ; ತೊಟ್ಟನೆ । ಬಂದಡಸುವ ಜವನಸವನನಾವಂ ಕಾವಂ? ॥ —(ಜೀ. ಸಂ)

ಟಿ॥ ಬೆರೆತಿರ್ಪ—ಸೊಕ್ಕಿರುವ. ಪೊಲ್ಲ—ಕೆಟ್ಟದು. ತೊಟ್ಟನೆ—ಶೀಘ್ರದಲ್ಲಿಯೆ.

ಮನಸ್ಸನ್ನು ಪರಮಾತ್ಮನಲ್ಲಿಡುವದು ಸುಲಭವೇನೂ ಅಲ್ಲ. ಹೇಗೆಂದರೆ ಈ ವಿಷಯದಲ್ಲಿ ಒಬ್ಬ ಅನುಭವಿಗಳು ಹೇಳಿರುವದೇನೆಂದರೆ—

ಕೇತಾರಗೌಳ—ಅಟತಾಳ

ಮನಸ ನಿಲಿಸುವದು ಬಲುಕಷ್ಟ । ಹರಿದಾಡುವಂಥ ॥ ಪ ॥ ಕಾಶಿಗ್ಹೋಗಲು ಬಹುದು; । ದೇಶ ತಿರುಗಲು ಬಹುದು; । ಆಶೆಬಿಟ್ಟಂತೆ ಇರಬಹುದು ॥ ೧ ॥ ಜಪವ ಮಾಡಲುಬಹುದು; । ತಪವ ಮಾಡಲು ಬಹುದು; । ಉಪವಾಸವ್ರತದಲ್ಲಿರಬಹುದು ॥ ೨ ॥ ಸ್ನಾನ ಮಾಡಲು ಬಹುದು; । ದಾನವ ಕೊಡಲು ಬಹುದು; । ಧ್ಯಾನದಿ ಪುರಂದರ ವಿಠಲ ಚರಣದಲ್ಲಿ ॥ ೩ ॥ —(ದಾ)

ಆದರೂ ದೇವರಿರುವ ಒಂದು ಸ್ಥಲವು ಸುಲಭವಾದದ್ದು. ಆದಕಾರಣ ಆ ಸ್ಥಲವನ್ನಾಶ್ರಯಿಸಿ ಅವನನ್ನು ಪಡೆಯಬಹುದು. ಅದು ಯಾವವದೆಂದರೆ ಅವನೇ ಹೇಳಿರುತ್ತಾನೆ—

ಶ್ಲೋ॥ ನಾಹಂ ವಸಾಮಿ ವೈಕುಂಠೇ; । ಯೋಗಿನಾಂ ಹೃದಯೇ; ರವೌ; । ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ॥ —(ಸು)

ಅ॥ ಹೆ, ನಾರದ, ನಾನು ವೈಕುಂಠದಲ್ಲಿಯೂ ಇಲ್ಲ; ಯೋಗಿಗಳ ಹೃದಯದಲ್ಲಿಯೂ ಇಲ್ಲ; ಸೂರ್ಯಮಂಡಲದಲ್ಲಿಯೂ ಇಲ್ಲ; ಭಕ್ತಿಯಿಂದ ನನ್ನ ಭಕ್ತರು ಹಾಡುವ ಕಡೆ ನಾನಿದ್ದೇನೆ.

ಹಾಡುಗಾರಿಕೆಯ ಮೂಲಕವಾಗಿ ಪರಮಾತ್ಮನನ್ನು ಪಡೆಯುವದು ಅಸಂಭವವಲ್ಲ. ಏಕೆಂದರೆ—

ಶ್ಲೋ|| ಕೃತೇ ಯದ್ಧ್ಯಾಯತೋ ವಿಷ್ಣುಂ, ತ್ರೇತಾಯಾಂ ಯಜತೋ ಮಖೈಃ;। ದ್ವಾಪರೇ ಪರಿಚರ್ಯಾಯಾಂ, ಕಲೌ ತದ್ಧರಿಕೀರ್ತನಾತ್ || —(ಸು)

ಅ|| ಕೃತಯುಗದಲ್ಲಿ ವಿಷ್ಣುವಿನ ಧ್ಯಾನದಿಂದಲೂ ತ್ರೇತಾಯುಗದಲ್ಲಿ ಯಜ್ಞಯಾಗಾದಿಗಳಿಂದಲೂ ದ್ವಾಪಾರಯುಗದಲ್ಲಿ ಸೇವೆಯಿಂದಲೂ ದೊರೆಯುವ ಲಾಭವು ಕಲಿಯುಗದಲ್ಲಿ ಕೀರ್ತನದಿಂದಾಗುವದು.

ಇದನ್ನೇ ಕಲಿಯುಗದ ಒಂದು ದೊಡ್ಡ ಗುಣವಾಗಿ ದೊಡ್ಡವರು ಹೇಳಿರುವದೇನೆಂದರೆ—

ಶ್ಲೋ|| ಕಲೇರ್ದೋಷನಿಧೇ ರಾಜನ್, ಅಸ್ತಿಹ್ಯೇಕೋ ಮಹಾನ್‌ಗುಣಃ;। ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂ ವ್ರಜೇತ್ || —(ಸು)

ಅ|| ಹೆ, ರಾಜನೆ, ದೋಷಗಳಿಂದ ತುಂಬಿ ತುಳುಕುತ್ತಿರುವ ಕಲಿಯಲ್ಲಿ ಒಂದು ದೊಡ್ಡ ಗುಣವಿದೆ. ಅದೇನೆಂದರೆ ಕೃಷ್ಣನ ಕೀರ್ತನದಿಂದಲೆ ಹುಟ್ಟುಸಾವುಗಳ ಕಟ್ಟನ್ನು ಕಳಚಿಕೊಂಡು ಉತ್ತಮಗತಿಗೆ ಹೋಗಬಹುದು.

ಸಾಮಗಾನಲೋಲನಾದ ಹರಿಯ ಕೀರ್ತನದ ರಸವನ್ನು ಕುರಿತು ಒಬ್ಬರು ಹೇಳಿರುವದೇನೆಂದರೆ—

ಶ್ಲೋ|| ದಧಿ ಮಧುರಂ ; ಮಧು ಮಧುರಂ; । ದ್ರಾಕ್ಷಾ ಮಧುರಂ ಸುಧಾಽಪಿ ಮಧುರೈವ; || ಮಧುರಾದಪಿ ತನ್ಮಧುರಮ್ । ಮಧುರಾನಾಥಸ್ಯ ನಾಮ ಯದ್ಗೀತಮ್ || —(ಸು)

ಅ|| ಮೊಸರು ಸಿಹಿ; ಜೇನುತುಪ್ಪ ಸಿಹಿ; ದ್ರಾಕ್ಷೆ ಸಿಹಿ; ಅಮೃತವೂ ಸಿಹಿಯೆ; ಶ್ರೀಕೃಷ್ಣನ ನಾಮಕೀರ್ತನೆಯು ಇವೆಲ್ಲಕ್ಕಿಂತ ಸಿಹಿ.

ಆದ್ದರಿಂದ ವಿವೇಕಿಗಳು ಉಪದೇಶಿಸುವದೇನೆಂದರೆ—

ಶ್ಲೋ|| ಹೇ ಜಿಹ್ವೇ, ರಸಸಾರಜ್ಞೇ, ಸರ್ವದಾ ಮಧುರಪ್ರಿಯೇ || ಶ್ರೀಕೃಷ್ಣನಾಮ ಪೀಯೂಷಂ ಪಿಬ ಜಿಹ್ವೇ ನಿರಂತರಮ್ || —(ಸು)

ಅ|| ಯಾವಾಗಲೂ ಸಿಹಿಯಮೇಲೆ ಇಷ್ಟವುಳ್ಳದ್ದಾಗಿ ರಸದ ಸಾರವನ್ನು ತಿಳಿಯಬಲ್ಲ ನಾಲಿಗೆಯೆ, ನೀನು ಯಾವಾಗಲೂ ಶ್ರೀಕೃಷ್ಣನ ನಾಮವನ್ನು ಕುಡಿ.

ನೀನು ಅದರ ಆವೇಶದ ಪರಮಾವಧಿಯನ್ನು ಮುಟ್ಟಬೇಕೆಂದು ಹಂಬಲಿಸಬೇಕಾದದ್ದೇನೆಂದರೆ—

ಸುರಟಿ—ಮಿಶ್ರಛಾಪು

ಎಂದಿಗೆ ನಾನೀ ಸುಖಪನುಭವಿಸುವೆನೊ || ಪ || ಇಂದುವ ವಿಚಾರಿಸಿಹ । ಇಂದಿರೆಯರಸನ । ಸುಂದರವದನವನಾ । ನಂದದಿ ನೋಡುತಿರುತ || ಅ. ಪ || ಹರಿಯನು ಪೂಜಿಸುತ । ಪರಿಪರಿವಿಧದಿ || ಹೊರಗಣ ವಸ್ತುಗಳ । ಮರೆಯುತ ಇದ್ದಲ್ಲಿಯೆ । ಇರುತಲಿ ಆ ಶ್ರೀಹರಿಗೆ । ಶರಣೆನುತಿರುತಿರುತ || ೧ || ದೇವನ ಹರಿ

ತೆಯ | ಕೇಳುತ ಕೇಳುತ || ಆ ವಿಧವಾದ ಭಕ್ತಿ | ಭಾವದಿ ಮೈಯ ಮರೆತು | ಪಾವನರೂಪಾಬ್ಧಿಯೊಳು | ಆವಗ ಮುಳುಗಿರುತ || ೨ || ನಾಮವ ಕೀರ್ತಿಸುತ | ಪ್ರೇಮದ ಭರದಿ || ರೋಮವು ಹುರಿಯೇರೆ | ನೇಮದಿ ಬೆವರೆ | ಆ ಮಹಿಮೆಯ ಮುಖದ | ಸೀಮೆಯನಾವರಿಸಿರೆ || ೩ || ದಡದಡ ಸುರಿಸುತ | ಕುಡಿತೆಯ ಕಣ್ಣ ನೀರ || ಗಡಗಡನಡುಗುತ | ನುಡಿಯೊಳು ತೊದಳುತ | ಸಡಗರದಿ ಮೃಡಸಖನ | ಅಡಿಯನು ಹಿಡಿದಿರುತ || ೪ || ಆದುದನೆಲ್ಲವನು | ಮಾಧವಗೊಪ್ಪಿಸಿ || ಭೂಧವನಾದಾತನ | ಪಾದವ ಮರೆಯದೆ | ಆದರದಿಂದ ಚಿದ್ವಿ | ನೋದವ ನೋಡುತಿರುತ || ೫ ||

—(ಭಕ್ತಿ ಗೀ)

ಇಂಥ ಸುಖವನ್ನು ಜನರು ಅನುಭವಿಸಿ ನೋಡಲೆಂದೇ ಭಗವದ್ಭಕ್ತರು ಕೀರ್ತನಾರಂಭದಲ್ಲಿ "ಕೀರ್ತನದ ಸವಿಯನನುಭವಿಸಿ ನೋಡು" ಎಂದು ಮೊದಲಾಗಿ ಉಪದೇಶಮಾಡಿರುವರು. ಇದಕ್ಕೆ ಉದಾಹರಣೆಯಾಗಿ ಮೀರಾಬಾಯಿಯ ಆಖ್ಯಾನವು ನಿರೂಪಣಮಾಡಲಾಗುವದು.

---

## ಆಖ್ಯಾನ

ಕೀ|| ಉದಯಪುರದೊಳಗೆ ರತಿಯಾರಾಣಾನು | ಸದಯನಾದ ದೊರೆಯಾಗಿರುತ || ಪದುಮನಾಭಭಕ್ತಿಯ ಬಿಡದಿದ್ದನು | ಚದುರನಾಗಿ ತಾನನವರತ ||

ವೀರಕ್ಷತ್ರಿಯನಾದ ಅವನ ಹೊಟ್ಟೆಯಲ್ಲಿ ಒಂದು ಹೆಣ್ಣು ಹುಟ್ಟಿತು. ಅದನ್ನು ಕವಿಗಳು ವರ್ಣಿಸಿರುವದೇನೆಂದರೆ—

ಚೌ|| ಬಿರುಬಿಸಿಲ ಬೇಗೆಯೊಳು ಚಂದ್ರಮ—ನಿರದೆ ಗಗನದೊಳುದಿಪವೊಲ್ | ಒರಟುಜಾಲಿಯ ಮರಗಳೆಡೆಯೊಳು—ಭರದಿ ಚಂದನವೆದ್ದವೊಲ್ || ಕೆರಳ್ದಸಿಂಹದ ನಡುವೆ ನಂದಿನಿ—ಬರುತ ತಾ ಕಂಗೊಳಿಪವೊಲ್ | ಬಿರುಸೆದೆಯೊಳುದಿಸಿದಳು ಕಲ್ಲನು—ಕರಗಿಸುವಳಿವಳೆಂಬವೊಲ್ ||

ಆ ಹುಡುಗಿಗೆ ಮೀರಾಬಾಯಿಯೆಂದು ನಾಮಕರಣವಾಯಿತು. ಆ ಹುಡುಗಿಯು ಸ್ವಲ್ಪ ದೊಡ್ಡವಳಾಗುತ್ತಲೇ—

ಕಂ|| ಓದುವಳು ಬೇಕು ಬೇ | ಕಾದ ಪುಸ್ತಕಗಳನು; | ಮೋದದಿಂ ಕೇಳ್ವಳು ಪುರಾಣವನ್ನು; || ಆದರದಿ ಭಕ್ತಜನ | ರಾದವರೊಳಗೆ ಸೇರಿ | ಯಾದವೇಂದ್ರನ ಭಜಿಪಳರ್ಥಿಯಿಂದ ||

ಹುಡುಗಿ ಆಡಿಕೊಳ್ಳಲೆಂದು ಕೊಟ್ಟ ಅವಕಾಶದಲ್ಲಿ ಹೀಗೆ ಭಕ್ತಿಯನ್ನು ಮೈಗೂಡಿಸಿಕೊಂಡ ಮೀರೆಯು ಇನ್ನೂ ಚಿಕ್ಕವಳಾಗಿರುವಾಗಲೆ ಒಬ್ಬ ವರನ ಮೆರವಣಿಗೆಯನ್ನು ನೋಡಿ ತನಗೊಬ್ಬ ವರನು ಬೇಕೆಂದು ತಂದೆಯನ್ನು ಕೇಳಲವನು ಆ ಹುಡುಗಿಗೆ ತಕ್ಕಂತೆ ಒಂದು ಶ್ರೀಕೃಷ್ಣವಿಗ್ರಹವನ್ನು ತಂದು ಕೊಟ್ಟನು. ಅದಕ್ಕೆ ಅವಳು ಶುಭಾಗಮನವನ್ನು ಬಯಸಿದ್ದು—

### ಮಾಲಕಂಸ—ಏಕತಾಳ

ಬಾರೊ ನಮ್ಮ ಮನೆಗೆ | ಗೋಪಾಲಕೃಷ್ಣ, | ಬಾರೊ ನಮ್ಮ ಮನೆಗೆ ‖ ಪ ‖ ಗೊಲ್ಲಬಾಲಕರನ್ನು | ನಿಲ್ಲಿಸಿ ಹೆಗಲಲ್ಲಿ | ಗುಲ್ಲುಮಾಡದೆ ಮೊಸ | ರೆಲ್ಲ ಸುರಿದ ಕೃಷ್ಣ ‖ ೧ ‖ ಕಸ್ತೂರಿತಿಲಕವು | ಶಿಸ್ತಾಗಿ ಹಣೆಯೊಳಿಟ್ಟ | ಮಸ್ತಕ ಏರೆ ಪರ | ವಸ್ತುಗಳೇಕೊ? ಕೃಷ್ಣ ‖ ೨ ‖ ನಾರಿಯರೆಲ್ಲರು ಕೂಡಿ | ನೀರಿಗೆ ಹೋಗುವಾಗ | ದಾರಿ ಅಡ್ಡಗಟ್ಟಿ | ಬಾರೆಂದು ಕರೆದ ಕೃಷ್ಣ ‖ ೩ ‖ ನಾರಿಯರ್ಬಿಚ್ಚಿಟ್ಟ | ಸೀರೆಗಳ್ಹಾರಿಸಿ | ಪೂರ ವೃಕ್ಷದ ಮೇ | ಲೇರಿ ನಿಂದ ಕೃಷ್ಣ ‖ ೪ ‖ ಅಂಗನೆಯರ ವ್ರತ | ಭಂಗವ ಪಡಿಸಿದ | ರಂಗವಿಠಲ ಭವ | ಭಂಗಿಸಿದಾ ಕೃಷ್ಣ ‖ ೫ ‖
—(ದಾ)

ಹೀಗೆಂದು ಅದನ್ನು ತೆಗೆದುಕೊಂಡು ಹೋಗಿ ತನ್ನ ಕೋಣೆಯಲ್ಲಿಟ್ಟುಕೊಂಡು ವಿದ್ಯಾಭ್ಯಾಸವನ್ನು ಮಾಡುತ್ತ ಮನುಷ್ಯತ್ವವನ್ನು ಸಾರ್ಥಕಮಾಡಿಕೊಂಡಳು. ಮನುಷ್ಯತ್ವಕ್ಕೆ ಸಾರ್ಥಕವಾದ ವಿದ್ಯಾಭ್ಯಾಸವೆಂದರೆ—

ಶ್ಲೋ॥ ಸಂಗೀತಸಾಹಿತ್ಯಕಲಾವಿಹೀನಃ | ಸಾಕ್ಷಾತ್ಪಶುಃ ಪುಚ್ಛವಿಷಾಣಹೀನಃ ‖ ತೃಣಂ ನ ಖಾದನ್ನಪಿ ಜೀವಮಾನಃ | ತದ್ಭಾಗಧೇಯಂ ಪರಮಂ ಪಶೂನಾಮ್ ‖
—(ಸು)

ಅ॥ ಸಂಗೀತ, ಸಾಹಿತ್ಯ—ಎಂಬೆರಡು ಕಲೆಗಳಿಲ್ಲದವನು ಬಾಲವೂ ಕೋಡೂ ಇಲ್ಲದ ಪಶುವೇ ಸರಿ. ಅವನು ಹುಲ್ಲುತಿನ್ನದೆ ಬದುಕಿರುವನು. ಅದೇ ಪಶುಗಳ ಸುದೈವ.

ಮೀರಾಬಾಯಿಯು ಸಂಗೀತಸಾಹಿತ್ಯವೆರಡರಲ್ಲಿಯೂ ಒಳ್ಳೆ ನಿಪುಣಳಾಗಿದ್ದಾಳೆ. ಹರಿಭಕ್ತಿಯಿಂದ ಕೂಡಿದ್ದ ಮೀರಾಬಾಯಿಗೆ ಸಂಗೀತವು ಬರುತ್ತಿದ್ದದ್ದು ಹೇಗೆ ಶೋಭಿಸಿತೆಂದರೆ—

ಸಾ॥ ಹಾಲು ತಾನೆ ರುಚಿ ಇರಲು ಸಕ್ಕರೆಯ | ಮೇಳವಾದ ತೆರದಿಂದೆ ‖
ಶ್ರೀಲೋಲನ ನಾಮವು ಸಂಗೀತದಿ | ಮೇಲೆಸಿಸಿತು ಜನರಿಂದೆ ‖

ವಿದ್ಯಾಭ್ಯಾಸವು ಮುಗಿಯುತ್ತಲೆ ಅವಳು ಮನಸ್ಸಿಗೆ ಉಪದೇಶಿಸಿದ್ದು—

ಶ್ಲೋ॥ ಸಚ್ಚಿತ್ತಭ್ರಮರ, ತ್ವಯಾಯದಿ ಪರಂ ಸ್ಥಾತವ್ಯಮೇವ ಕ್ವಚಿತ್ | ತಚ್ಛ್ರೀಕೃಷ್ಣಪದಾಂಬುಜೇ ಏಕಸಿತೇ ರಾತ್ರಿಂದಿವಂ ಸ್ಥೀಯತಾಮ್; ‖ ತತ್ಸ್ಥಿತ್ವಾ ತವ ಬಂಧನಂ ನ ಹಿ ಭವೇಜ್ಜಾತೋಽಪಿ ಚೇದ್ಬಂಧನೇ | ತದ್ಬಂಧಾದಪಿ ಮುಕ್ತಿರೇವ ಭವಿತಾ ತತ್ಕೌತುಕಂ ಪಾತು ಮಾಮ್ ‖
—(ಸು)

ಅ॥ ಮನಸ್ಸೆಂಬ ಭ್ರಮರವೆ, ನೀನು ಎಲ್ಲಿಯಾದರೂ ಒಂದು ಕಡೆ ನಿಲ್ಲಬೇಕಾದರೆ ಅರಳಿರುವ ಶ್ರೀಕೃಷ್ಣಪಾದಕಮಲಗಳಲ್ಲಿ ಹಗಲೂ ಇರುಳೂ ಇರು. ಅಲ್ಲಿದ್ದರೆ ನಿನಗೆ ಬಂಧನವಾಗುವದಿಲ್ಲ. ಬಂಧನವಾದರೂ ಆ ಬಂಧನದಿಂದ ಮುಕ್ತಿಯೇ ಆಗುವದು. ಈ ಕೌತುಕವು ನನ್ನನ್ನು ಕಾಪಾಡಲಿ.

ಈ ಪ್ರಕಾರ ಬುದ್ಧಿಯನ್ನು ಹೇಳಿ ತೆಗೆದುಕೊಂಡ ವೀಣೆಯನ್ನು ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ಗಾನಾಬ್ಧೇಸ್ತು ಪರಂ ಪಾರಂ ನೋಪೇಯಾಯ ಸರಸ್ವತೀ; | ಅತೋ ನಿಮಜ್ಜನಭಯಾತ್ತುಂಬೀಂ ವಹತಿ ವಕ್ಷಸಿ ‖
—(ಸು)

ಅ|| ಸರಸ್ವತಿಯು ಸಂಗೀತವೆಂಬ ಸಮುದ್ರದ ಆಚೆಯ ದಡಕ್ಕೆ ಹೋಗಲಿಲ್ಲ. ಆದ್ದರಿಂದ ಮುಳುಗೇನೆಂದು ಹೆದರಿ ಎದೆಯಮೇಲೆ ಸೋರೇಬುರುಡೆಯನ್ನಿಟ್ಟುಕೊಂಡಳು.

ಈ ಮೀರಾಬಾಯಿಯನ್ನು ವರಿಸುವದಕ್ಕೆ ಅನೇಕ ರಾಜಪುತ್ರರು ಬಂದರೂ ಅವಳ ಪ್ರತಿಭೆಯ ಮುಂದೆ ನಿಸ್ತೇಜಸ್ಕರಾಗಿ ಹೋದರು. ಮೀರಾಬಾಯಿಯಾದರೋ ಪರಮಾತ್ಮನಲ್ಲಿ ನಟ್ಟ ಮನಸ್ಸಿನಿಂದ ದೇಹಭಾವವೇ ಇಲ್ಲದವಳಾಗಿದ್ದಕಾರಣ ಆ ರಾಜಪುತ್ರರು ತನ್ನನ್ನೇಕೆ ನೋಡಬರುವರೆಂಬ ಉದ್ದೇಶವೇ ಅವಳಿಗೆ ತಿಳಿಯಲಿಲ್ಲ. ಈ ಸ್ಥಿತಿಯೇನೊ ಸರ್ವಸಾಮಾನ್ಯವಲ್ಲ—

ತ್ರಿ|| ಏವರಟ್ಟ್ಟಸವನು ಯೌವನದ ಹಾಡನ್ನು | ಹೊಯ್ಯು ತಾ ವಶಕೆ ತಂದಾತ ಜಗದೊಳು | ದೈವ ತಾನಕ್ಕು ಸರ್ವಜ್ಞ || —(ಸ.ಪ.)

ಆದರೂ ತಂದೆಯ ಪ್ರಯತ್ನದಿಂದ—

ಸಾಂ|| ಚಿತ್ತೂರಿನ ಕುಂಭನೆಂಬುವನನು ಬಂದು | ಮತ್ತಗಮನೆಯನು ವರಿಸಿ || ಚಿತ್ತದಿ ಸಂತಸದಾಳ್ದನು ಸರ್ವನಂ | ಪತ್ತು ಒಂತೆಸ್ಮೃತೆ ನೆನಸಿ ||

ಗಂಡನ ಮನೆಗೆ ಹೋಗುತ್ತಲೆ— —(ಸ. ಪ.)

ದಿ|| ಸೊಸೆಯು ತಂದಾ ಕೃಷ್ಣನನು ಅತ್ತೆ ನೋಡಿ | ವಿಷಮವಾಯ್ತೆಂದ ಳ್ಳುಹಳ ಮಾತನಾಡಿ ; || ಮನಗಿ ಶಕ್ತಿಯುಪಾಸಕರು ತಾವೆನುತ್ತೆ | ಸೊಸೆಯ ಬೇರಿಟ್ಟಳ್ ಸಿಟ್ಟ ತೋರಿಸುತ್ತೆ ||

ಆ ಏಕಾಂತವಾಸವು ಮೀರಾಬಾಯಿಯ ಸ್ವಭಾವಕ್ಕೆ ಕಷ್ಟಕರವಾಗಿತ್ತು. ಏಕೆಂದರೆ—

ಭೋ|| ಜನಗಳಿಲ್ಲದೆಡೆಯೊಳಿಹುದೆ | ಮನಕೆ ಶಾಂತಿ ಜಗದಿ ಬಹಳ | ಜನಕೆ; ಮೀರಾಬಾಯಿಯ ಸ್ವಭಾವವರಿಯಲು || ಜನಗಳೊಡನೆ ಕೂಡಿಕೊಂಡು | ಮನಕೆ ಶಾಂತಿ ತಂದುಕೊಂಡು | ಜನರಗಡನು ನೂರೆಗೈವ ಪರಿಯೊಳಿರ್ದುದು ||

ಆಗ ಅಲ್ಲಿ ಅವಳು ತನ್ನ ಪ್ರಕಟವಾದ ಭಜನೆಗೆ ಅವಕಾಶವಿಲ್ಲದೆ ಕಾವ್ಯರಚನೆಯ ಕಡೆಗೆ ಕಣ್ಣುಹಾಕಿದಳು. ಕಾವ್ಯದ ವಿಷಯವಾಗಿ ಕವಿ ಹೇಳಿರುವದೇನೆಂದರೆ—

ಶ್ಲೋ|| ಶಬ್ದಶಕ್ತ್ಯೈವ ಕುರ್ವಾಣಾ ಸರ್ವದಾನವನಿರ್ವೃತಿಮ್, | ಕಾವ್ಯವಿದ್ಯಾ ಶ್ರುತಿಗತಾ ಸ್ಯಾನ್ಮೃತಸ್ಯಾಪಿ ಜೀವನೀ || —(ಸು ಲಾ)

ಅ|| (೧) ಶಬ್ದಶಕ್ತಿಯಿಂದಲೆ (ಸರ್ವದಾ + ನವ + ನಿರ್ವೃತಿಂ) ಯಾವಾಗಲೂ ಹೊಸ ಸುಖವನ್ನು ಮಾಡುವಂಥ (ಕಾವ್ಯವಿದ್ಯಾ) ಕಾವ್ಯವೆಂಬ ವಿದ್ಯೆಯು ಕಿವಿಗೆ ಬಿದ್ದರೆ ಬೇಸತ್ತವರೂ ಉಲ್ಲಾಸಗೊಳ್ಳುವರು. (೨) ಶಬ್ದಶಕ್ತಿಯಿಂದಲೆ (ಸರ್ವ + ದಾನವ + ನಿರ್ವೃತಿಂ) ಸಮಸ್ತ ರಾಕ್ಷಸರ ಸುಖವನ್ನು ಮಾಡುವಂಥ (ಕಾವ್ಯವಿದ್ಯಾ) ಶುಕ್ರಾಚಾರ್ಯನ ವಿದ್ಯೆಯು ಕಿವಿಗೆ ಬಿದ್ದರೆ ಸತ್ತವರನ್ನೂ ಬದುಕಿಸುವದು.

ಈ ಮಾತನ್ನು ಅನುಭವಕ್ಕೆ ತಂದುಕೊಡುವಂತೆ ಅವಳು—

ಕ|| ಅಂದು ಗೀತಗೋ | ವಿಂದಕೆ ತಾ ನಲ | ವಿಂದಲಿ ಟೀಕೆಯ ರಚಿಸಿದಳು || ಸುಂದರಿ ಪತಿಗದ | ರಿಂದ ಕೀರ್ತಿಬರೆ | ಮುಂದೆ ಜನಗಳದ ಶ್ಲಾಘಿಸಲು ||

ಹೀಗಿರುತ್ತ ಒಂದು ದಿನ ತನ್ನ ಮೃದುಕಂಠದಿಂದ ಇಷ್ಟದೈವವನ್ನು ನೆನೆಸಿಕೊಳ್ಳುತ್ತಿದ್ದಾಳೆ—

**ಕಾಂಬೋದಿ—ಆದಿತಾಳ**

ಕಣ್ಗಳಲ್ಲಿ ಕಟ್ಟಿದಂತಿದೆ । ಒಣ್ಣಾವಾತಲ್ಲವೆನ್ನಂತೆ ಭಾವಿಸಿ ನೋಡಬಾರದೆ ? ॥ ಪಸೂಡಿದ ಸೋಗೆಗರಿಯ ಕಡುಸೊಂಪು, । ಸೊಗಸುವಡೆದ ಸುಳಿಗುರುಳಿನ ಗುಂಪು, ॥ ಆಡುವ ಮುರುಹು ಮಾಗಾಯ್ಗಳ ಪೆಂಪು, । ಕೂಡೆ ಕುಣಿವ ಕುಡುವುರ್ವಿನಲಂಪು ॥ ೧ ॥ ಕೊಳಲೆಡೆಗೆಡೆಗಪುರುವ ಕೆಂಬೆರಲು, । ಕೊಸಬು ಪಡೆಯೆ ಕೊಂಕುವ ಗೆರೆಗೊರಲು, ॥ ತಳತಳಿಸುವ ತೇಲುವ ಕಣ್ಮಲರು, । ತನಿಗಂಪನು ಸೂಸುವ ಸುಯ್ಯೆಲರು ॥ ೨ ॥ ಸಿರಿಯೆದೆಯೊಳು ತೊಳಗುವ ಪುಲಿಯುಗುರು, । ಸಿಂಗರಿಸಿದ ಸಿರಿಗಂಡದ ತಿಗುರು, ॥ ಕೊರಲ ದಾಡೆಯ ತೊಳಸಿಯ ಪೊಸಚಿಗುರು, । ತೆರೆ ಪುಸಗುವ ಪೊಂದುಗುಲದ ಪೊಗರು ॥ ೩ ॥ ಮುಳಿದು ಯಶೋದೆ ಕಟ್ಟಿದ ಪೊಡೆದಾರ, । ಪುದ್ದುವಡೆದ ನೇವಳದುಡಿದಾರ, ॥ ಬಳಸಿದ ಪವಳಸರದ ಸಿಂಗಾರ, । ಬಣ್ಣದುಡೆಯ ಬಿಗಿದುಟ್ಟ ವೈಯಾರ, ॥ ೪ ॥ ಒಂದಟಿ ತಲದೊಳು ನಿಂದಿಹ ನಿಲವು, । ಸುತ್ತೊಂದಡಿಯನು ಸಾರ್ಚಿದ ಬಲುಗೆಲವು, ॥ ಮುಂದೆಯು ಪಸುಗಳ ಪುಸ್ಸಿಪ ಸಲವು, । ಮಡವ ಸವಿವಸಲ್ಗರುವಿನೊಳೊಲವು ॥ ೫ ॥ —(ಗೀ. ಗೋ.)

ಇಷ್ಟರಲ್ಲಿ ಪ್ರಾಪಂಚಿಕಸುಖಕ್ಕೆ ಮೀರೆಯು ತಕ್ಕವಳಲ್ಲವೆಂದರಿತು ಝಲವಾರದ ರಾಜಕುಮಾರಿಯನ್ನು ಕದ್ದುತಂದು ಮದುವೆಯಾಗಿ ಅವಳೊಡನೆ ಲೋಲನಾಗಿದ್ದ ಕುಂಭನು ಇದನ್ನು ಮರೆಯಲ್ಲಿ ಆಲಿಸಿ ಕನಿಕರಗೊಂಡು ಅರಮನೆಗೆ ಸೇರಿದ ಹಾಗೆ ಅವಳಿಗಾಗಿ ಒಂದು ಗುಡಿಯನ್ನು ಕಟ್ಟಿಸಿಕೊಟ್ಟು ಅಲ್ಲಿ ಭಕ್ತಜನರು ಸೇರಬಹುದೆಂದೂ ದೇವತಾಸೇವೆ ನಡೆಯಬಹುದೆಂದೂ ಒಪ್ಪಿದನು. ಆದರೆ ಈ ಸುಯೋಗವು ಬಹುದಿವಸ ನಡೆಯಲಿಲ್ಲ. ಏಕೆಂದರೆ—

ಭಾ॥ ಝಾಲವಾರದ ಕುಮರಿಯೊಳು ಮನ । ಕೀಲಿಸಿದ ಮಂದಾರ ರಾಜನು । ತಾಳಿ ವೇಷಾಂತರವ ಬಂದಾ ಭಜನೆ ಮುಗಿಯುತಲೆ ॥ ಆ ಲಲನೆಯನು ನೋಡಬಯಸಲು । ಕೀಳುತನವರಿಯದಿಹ ಮಿರೆಯುವ । ಓಲಗದ ಮನೆದೋರಲವನನು ಕಂಡನಾ ಕುಂಭ ॥

ವೇಷಾಂತರದ ರಾಜಪುತ್ರನನ್ನು ಕಾಣುತ್ತಲೆ ಇದೆಲ್ಲ ಮೀರೆಯ ದೇವತಾಸೇವೆಯ ದುಷ್ಪರಿಣಾಮವೆಂದು ಕುಂಭನು ಮೀರೆಯ ಮೇಲೆ ಕೋಪವನ್ನು ಮಾಡಿ ಅವಳನ್ನು ಮನೆಯಿಂದ ಹೊರಗೆ ಹಾಕಿದನು. ಅದನ್ನು ಅವಳೇನೂ ವಿರೋಧವಾಗಿ ಭಾವಿಸಲೇ ಇಲ್ಲ. ಏಕೆಂದರೆ—

ಕಂ॥ ಸಿಟ್ಟೆಬ್ಬಿಸಿದೊಡಮನಿಸಂ । ಪುಟ್ಟದು ಸಾಧುಗಳ ಮನದೊಳಹಹ! ವಿಕಾರಂ; ॥ ದಟ್ಟಿಯ ಪುಲ್ಗೊಳ್ಳಿಯನಾಂ । ತಿಟ್ಟೊಡೆ ಬಿಸಿಯಪ್ಪುದೇಂ? ವಲಂ ಕಡಲ ಜಲಂ ॥ —(ನ. ಶ)

ಆಮೇಲೆ ಮೀರೆಯ ಸರಳಸ್ವಭಾವವನ್ನರಿತಿದ್ದ ಜನರು ಕುಂಭನಿಗೆ ಸಮಾಧಾನವನ್ನು ಹೇಳಿ ಮತ್ತೆ ಮೀರಾಬಾಯಿಯನ್ನು ಮನೆಗೆ ಕರೆದುಕೊಂಡು ಬಂದರು. ಮತ್ತೆ ಎಂದಿನಂತೆ ಕೀರ್ತನವು ನಡೆಯುತ್ತಿರುವಾಗ ಒಮ್ಮೆ ಏನಾಯಿತೆಂದರೆ—

ಕೀ॥ ಮೊಗಲರರಸನೆನಿಸಿದ ಚಕ್ರೇಶನು । ಮಿಗಿಲಚ್ಚರಿಗೊಂಡನ ಕೇಳಿ ॥
ಹೊಗಳುತದನು ನೋಡಲು ತಾ ಬಂದನು । ಜಗವರಿಯದ ವೇಷವ ತಾಳಿ ॥

ಆದಿನದ ಕೀರ್ತನವೆಲ್ಲ ಮುಗಿದಮೇಲೆ ಆನಂದಗೊಂಡ ಆ ಶ್ರೀಮಂತನು ಜನ್ಮಸಾರ್ಥಕ್ಕೇನು ಸಾಧನವೆಂದು ಕೇಳಿದಾಗ ಮೀರಾಬಾಯಿ ಹೇಳಿದ್ದು—

ಶ್ಲೋ॥ ಸಂಸಾರೇ ವರ್ತಮಾನಸ್ಯ ನಾನಾದುಷ್ಕೃತಿಕಾರಿಣಃ । ಯದಿ ತೇ ನರಕಾದ್ಭೀತಿಃ ಕೃಷ್ಣಮೇಕಂ ಸಮಾಶ್ರಯ ॥ —(ಸು. ೮೨)

ಅ॥ (೧) ಸಂಸಾರದಲ್ಲಿದ್ದುಕೊಂಡು ಅನೇಕ ಪಾಪಕರ್ಮಗಳನ್ನು ಮಾಡಿರುವ ನಿಮಗೆ ನರಕದ ಭೀತಿಯಿದ್ದರೆ ಕೃಷ್ಣನೊಬ್ಬನಿಗೆ ಶರಣು ಹೋಗಬೇಕು. (೨) ನರಕಾಸುರನ ಕಡೆಯಿಂದ ಹೆದರಿಕೆ ಇದ್ದರೆ ಕೃಷ್ಣನೊಬ್ಬನಿಗೆ ಶರಣು ಹೋಗಬೇಕು.

ಇದನ್ನೇ ಭಾಗವತಶಿರೋಮಣಿಗಳು ಉಪದೇಶಮಾಡಿರುವದೇನೆಂದರೆ—

ಕಾಂಬೋದಿ—ಅಟತಾಳ

ಪಾದವ ನೆರೆ ನಂಬಿ ಬದುಕಿರೊ । ನಮ್ಮ । ಯಾದವ ನಾರಾಯಣನ ದಿವ್ಯ ಶ್ರೀ ॥ ಪ ॥ ಹಿಂದಣ ನಡತೆಗೆ ಹೇಸಿರೊ; । ಮುಂದೆ । ನಿಂದೆ ಬಾರದವೊಲು ನೀಸಿರೊ; ॥ ನೀ । ಬಂದು ಮೊದಲು ಕುಲಕೇಳಿಗೆಯಪ್ಪಂತೆ । ಒಂದೆ ದಿಟವ ಪಿಡಿದುತ್ತಮರೆನಿಸಿರೊ ॥ ೧ ॥ ನಿಮ್ಮ ನೆಲೆಯ ನೀವೆ ತಿಳಿಯಿರೊ; । ತಿಳಿ । ದೊಮ್ಮದ ನಡತೆಯನುಳಿಯಿರೊ; ॥ ಬಲು । ಹಮ್ಮು ಹೆಮ್ಮೆಗಳನು ಕಳೆಯಿರೊ; । ಸಜ್ಜನ । ಸಮ್ಮತವಪ್ಪಂತೆ ಸನ್ಮಾರ್ಗಪಿಡಿಯಿರೊ ॥ ೨ ॥ ಕರ್ಮದ ಬಿರುಗಂಟ ಕಳೆಯಿರೊ; । ನಿಮ್ಮ । ದುರ್ಮತಿಧೂಳಿಯ ತೊಳೆಯಿರೊ; ॥ ಮುಗೆ । ನಿರ್ಮಲ ಚಿತ್ತದಿ ನೇಮಪಿಡಿದು ನಮ್ಮ । ತಿಮ್ಮಲಾರ್ಯರಂತೆ ಸುಖವಾಗಿ ಬಾಳಿರೊ ॥ ೩ ॥ —(೧. ಗೋ)

ಇದು ಹೇಗೆ ಕೊನೆಗಂಡಿತೆಂದರೆ—

ಸಾ॥ ಜನಪನದಕೆ ಮೆಚ್ಚುತಲೊಂದೊಡವೆಯ । ನನುನಯದಿಂ ಕೊಡಲದನು ॥ ತನಗೆ ಬೇಡವೆನಲಾಕೆ ಕೃಷ್ಣಗೆಂ । ದೆನುತಿಡುತದನ್ನೈದಿದನು ॥

ಈ ಸುದ್ದಿ ತಿಳಿಯುತ್ತಲೆ ಕುಂಭನಿಗೇನಾಯಿತೆಂದರೆ—

ಶ್ಲೋ॥ ಮರ್ಕಟಸ್ಯ ಸುರಾಪಾನಂ, ತಸ್ಯ ವೃಶ್ಚಿಕದಂಶನಮ್, । ತನ್ಮಧ್ಯೇ ಭೂತಸಂಚಾರೋ, ಯದ್ವಾ ತದ್ವಾ ಭವಿಷ್ಯತಿ ॥ —(ಸು)

ಅ॥ ಕೋತಿಗೆ ಮದ್ಯವನ್ನು ಕುಡಿಸಿರುವಾಗ ಚೇಳು ಕಚ್ಚಿ ಅದರ ಜೊತೆಗೆ ಪಿಶಾಚಿಯ ಆವೇಶವೊಂದು ಸೇರಿದರೆ ಆಗಬಾರದ್ದೆಲ್ಲ ಆಗುತ್ತದೆ.

ಒಡನೆ ಮೀರಾಬಾಯಿಯನ್ನು ನಿಂದಿಸುವದಕ್ಕಾರಂಭವಾಯಿತು. ಆದರೇನು?—

ವೃ॥ ಅರಿಯದು ಕಪ್ಪೆ ಸಾಗರವು ಮಂಥದು ಕುಂದೆ? ಗೂಗೆ ಕಂ । ಡರಿಯದು ಚಂಡರೋಚಿಯ ಪ್ರಸಂಗದು ಭಂಗವೆ? ನೋಡೆ ಕಾಗೆ ಕಂ । ಡರಿಯದು ಚಂದ್ರನಂ ಶಶಿಗೆ ಹೀನವೆ? ಸಜ್ಜನರೊಳ್ಪನಿಂ । ತರಿಯದೆ ದುರ್ಜನಂ ಪಳಿಯೆ ಕಪ್ಪತೆ ಸಂಗರ್ಮವು ದಿವ್ಯತಪ್ಪರಂ? ॥ —(ಧ. ಅ)

ಕೊನೆಗೆ ಮೀರಾಬಾಯಿಯಿಂದ ತಮ್ಮ ಮನೆತನಕ್ಕೆ ಅಪಯಶಸ್ಸು ಬರುವದೆಂದು ಅವನು ಆಕೆಯನ್ನು ಊರಿಂದ ಹೊರಡಿಸಿಬಿಟ್ಟನು. ಆಗಲೂ ಆಕೆಯು ಸಮಾಧಾನದಿಂದ—

ಸಾಂ॥ ತೊರೆಯುತ್ತೆ ರಾಜವಸ್ತ್ರಾಭರಣಂಗಳ । ಹರುಷಕೆ ಕುಂದನು ತರದೆ ॥ ಹೊರವಂಟಳಾಕ್ಷಣ ತಂಬೂರಿಯೊಡನೀಕೆ । ಹರಿನಾಮಸ್ಮರಣೆಯ ಬಿಡದೆ ॥

ಮೀರಾಬಾಯಿಯು ಕ್ಷುದ್ರಕಾರಣಗಳಿಂದ ಕಳವಳಗೊಳ್ಳುವವಳಾಗಿರಲಿಲ್ಲ. ಮತ್ತೆ ಹೇಗಿದ್ದಳೆಂದರೆ—

ಶ್ಲೋ॥ ತೀರ್ತ್ವಾ ಮೋಹಾರ್ಣವಂ, ಹತ್ವಾ ರಾಗದ್ವೇಷಾದಿರಾಕ್ಷಸಾನ್, । ಯೋಗೀ ಶಾಂತಿಸಮಾಯುಕ್ತ ಆತ್ಮಾರಾಮೋ ವಿರಾಜತೇ ॥ (— ಅ. ಬೋ)

ಅ॥ (ಸಂಸಾರವೆಂಬ) ದೊಡ್ಡ ಕಡಲನ್ನು ದಾಟಿ ರಾಗ, ದ್ವೇಷ—ಎಂಬೀ ರಾಕ್ಷಸರನ್ನು ಕೊಂದು ಶಾಂತಿಯಿಂದ ಕೂಡಿರುವ ಯೋಗಿಯು ತನ್ನ ಆನಂದದಲ್ಲಿ ತಾನು ಶೋಭಿಸುತ್ತಾನೆ.

ಇಂಥವರನ್ನೇ ಮುನಿಗಳೆಂದು ಹೇಳುವದು—

ಶ್ಲೋ॥ ದುಃಖೇಷ್ವನುದ್ವಿಗ್ನಮನಾಃ, ಸುಖೇಷು ವಿಗತಸ್ಪೃಹಃ, । ವೀತರಾಗಭಯಕ್ರೋಧಃ, ಸ್ಥಿತಧೀರ್ಮುನಿರುಚ್ಯತೇ ॥ —(ಭ. ಗೀ)

ಅ॥ ಕಷ್ಟ ಬಂದಾಗ ತಗ್ಗದೆ ಸುಖ ಬಂದಾಗ ಹಿಗ್ಗದೆ ರಾಗ, ಭಯ, ಕ್ರೋಧ—ಇವುಗಳನ್ನು ಬಿಟ್ಟು ಮನಸ್ಸನ್ನು ಕದಲದಹಾಗೆ ಇಟ್ಟುಕೊಂಡಿರುವವನಿಗೆ ಮುನಿಯೆಂದು ಹೆಸರು.

ಮುಖಾರಿ—ಅಟತಾಳ

ನಿಂದೆಗೈವರು ನಿಮಗೆ ನಿಂದಿಸುತಿರಲಿ ॥ ಪ ॥ ನಿಂದೆಗೈವರು ನಿಮಗೆ ನಿಂದಿಸಲಿಮಗದ । ರಿಂದ ಕೊರತೆಯಾವುದದಕೆ ಬಿನ್ನವಿಸೆನು; । ನಂದಕಾಯಧ ನಿನ್ನ ಸಲ್ಲಡಿಗನುಸರಿಸಿ । ದಂದುಗೆಯೊಳು ಕಳೆಯೊಂದಿರೆ ಚಿತ್ತಕೆ । ಬಂದ ಪರಿಯೊಳದ ಒಣ್ಣಾಗೈವುದು ಲೇಸು ॥ ೧ ॥ ಪೊಲ್ಲದ ನುಡಿಗಳ ನೊಲ್ಲಿಸುತಿರಲಿ ॥ ಪ ॥ ಪೊಲ್ಲದ ನುಡಿಗಳ ನೊಲ್ಲಿಸುತಿರ್ದೊಡೆ । ಎಲ್ಲವೆಮಗೆ ಹೀನವದಕೆ ಬಿನ್ನವಿಸೆನು; ॥ ಬಲ್ಲರ ಬಲ್ಲಹ ಪಾವನವಹ ನಿನ್ನ । ಮೆಲ್ಲಡಿಗಳದೊಳು ಮಿನುಗುವ ರೇಖೆಗ । ಳಲ್ಲಿ ಧೂಳಿರೆ ತೊಡೆದನುಗೈವುದು ಲೇಸು ॥ ೨ ॥ ಬೈದೊಡೆ ಬೈದರ ಬಾಯಿನೊಂದಪುದು ॥ ಪ ॥ ಬೈದೊಡೆ ಬೈದರ ಬಾಯಿನೊಂದಪುದೆಮ । ಗಾದ ಕೊರತೆಯಾವುದದಕೆ ಬಿನ್ನವಿಸೆನು; । ಯಾದವ ನಾರಾಯಣ ನಿನ್ನ ದಿವ್ಯಶ್ರೀ । ಪಾದ ನೋಂಕಿದ ಽನ್ನವಾವ್ರಗೆ ಮಾಸಿರೆ । ಆದರಿಂದದನನುಗೈವುದು ಲೇಸು ॥ ೩ ॥

—(ಗೀ. ಗೋ)

ಜನರು ಕುಂಭನಿಗೆ ಮತ್ತೆಯೂ ಸಮಾಧಾನವನ್ನು ಹೇಳಿದರು. ಕುಂಭನೂ ಕೂಡ ಕೆಲವು ದಿನಗಳಾದರೂ ಮೀರಾಬಾಯಿಯ ಸಹವಾಸದಲ್ಲಿದ್ದವನಾದ್ದರಿಂದ ಅವಳ ಮೇಲಿನ ಗಾಳಿ ಬೀಸಿ ಅವನ ಹೃದಯವೂ ದಾರಿಗೆ ತಿರುಗಿತ್ತು.

ಶ್ಲೋ॥ ಸತ್ಸಂಗಾದ್ಭವತಿ ಹಿ ಸಾಧುತಾ ಖಲಾನಾಮ್; । ಸಾಧೂನಾಂ ನ ಚ ಖಲಸಂಗಮಾತ್ಖಲತ್ವಮ್; ॥ ಆಮೋದಂ ಕುಸುಮಭವಂ ಮೃದೇವ ಧತ್ತೇ; । ಮೃದ್ಗಂಧಂ ನ ಚ ಕುಸುಮಾನಿ ಧಾರಯಂತಿ ॥ —(ಸು)

ಅ॥ ಸತ್ಸಂಗದಿಂದ ಖಲರಿಗೂ ಸಾಧುತ್ವವು ಬರುವದು. ಸಾಧುಗಳಿಗೆ ಮಾತ್ರ ಖಲಸಂಗದಿಂದ ಖಲತ್ವವು ಬರುವದಿಲ್ಲ. ಹೂವಿನಿಂದ ಹುಟ್ಟಿದ ಸುವಾಸನೆಯನ್ನು ಮಣ್ಣು ಹಿಡಿದುಕೊಳ್ಳುತ್ತದೆ. ಮಣ್ಣಿನ ವಾಸನೆಯನ್ನು ಹೂ ಹಿಡಿದುಕೊಳ್ಳುವದಿಲ್ಲ.

ಇಷ್ಟರಲ್ಲಿ ಮೀರಾಬಾಯಿಯು ವೃಂದಾವನದ ದಾರಿಯನ್ನು ಹಿಡಿದು ಹೋಗುತ್ತ ಮಾರ್ಗದಲ್ಲಿ ಜೀವಗೋಸಾಯಿ ಎಂಬ ಸಾಧು ಹೆಂಗಸರ ಮುಖವನ್ನು ನೋಡುವದಿಲ್ಲವೆಂಬ ಸುದ್ದಿಯನ್ನು ಕೇಳಿ ಮನದಲ್ಲಿ ಯೋಚಿಸಿದ್ದು —

ಸಾಂ॥ ಹೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ? । ಹೆಣ್ಣಲ್ಲವೆ ಪೊರೆದವಳು?॥ ಹೆಣ್ಣುಹೆಣ್ಣೆಂದೇತಕೆ ಬೀಳುಗಳೆವರು ? ॥ ಕಣ್ಣುಕಾಣದ ಗಾವಿಲರು ॥ —(ಹ. ಧ.)

ಅಷ್ಟುಹೊತ್ತಿಗೆ ಮೀರಾಬಾಯಿಯ ಮಹೋನ್ನತಭಕ್ತಿಯನ್ನು ಕೇಳಿ ಆ ಸಾಧು ತಾನೆ ಬಂದಾಗ ಮೀರಾಬಾಯಿ ಹೇಳಿದ್ದು —

ಸಾ॥ ಗಂಡಸೊಬ್ಬನೇ ಕೃಷ್ಣಮೂರ್ತಿ; ಬ್ರ । ಹ್ಮಾಂಡದೊಳಗೆ ಪರಸಿಲ್ಲ॥ ಹೆಂಡರುಗಳು ಜೀವರುಗಳೆಲ್ಲರಿದ । ಕಂಡರೆ ಬಂಧನವಿಲ್ಲ ॥

ಕೆಲವು ದಿವಸಗಳಲ್ಲಿಯೇ ಕುಂಭನ ಕಡೆಯವರು ಬಂದು ಮೀರಾಬಾಯಿಯನ್ನು ಮತ್ತೆ ಊರಿಗೆ ಕರೆದುಕೊಂಡು ಹೋದರು. ಆದರೂ ಆಕೆಯ ಮನಸ್ಸು ತೀರ್ಥಯಾತ್ರೆಯ ಕಡೆಗ ಹರಿದಿತ್ತು. ಒಮ್ಮೆ ಅವಳು ದ್ವಾರಕೆಯ ಕಡೆಗೆ ಹೋಗುತ್ತಿದ್ದಾಗ —

ಸಾಂ॥ ಎಸುತ ಕೃಷ್ಣಾ, ಕೃಷ್ಣ, ಎಂಬ ನಾಮುವನಾಕೆ । ಘನಭಕ್ತಿ ಭಾವದ ಭರದಿ ॥ ಜಸಿನೆ ಸಮಾಧಿಯೈಕ್ಯವನಲ್ಲಿ ತಳೆದಳು । ಚಿನುಮಯ ರೂಪವಹೊಂದಿ ॥

ಈ ಮಹತ್ಫಲವನ್ನು ಲಕ್ಷ್ಯದಲ್ಲಿಟ್ಟೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ "ಕೀರ್ತನದ ಸವಿಯನನುಭವಿಸಿ ನೋಡು " ಎಂದು ಮುಂತಾಗಿ ಉಪದೇಶಮಾಡಿರುವರು.

---

# ಕಬೀರದಾಸ

## ಪೀಠಿಕೆ—ನಾಮಸ್ಮರಣೆ

ತೋಡಿ—ತ್ರಿಪುಟ

ಸುಲಭವಾಗಿರುವ ಸಾಧನವನ್ನು ಕೇಳು ॥ ಪ ॥ ತಿಳಿಯೆ ನಿನ್ನುದ್ಧಾರವನು ಗೈದು ಬಾಳು ॥ ಅ. ಪ ॥ ಗುರುಸೇವೆಯೊಳು ನಿಂದು ತೊರೆಯಹಂಕಾರವನು ;। ನೆರೆ ವಿಚಾರಿಸು ಮೋಕ್ಷವೆಂತೆಂಬುವದನು; ॥ ಪರಿಪರಿಯ ಕೆಲಸದೊಳು ತೊಡಗಿರ್ದೊಡಂ ನೀನು । ಮರೆಯದಿರು ಭಗವಂತನಮಲನಾಮವನು ॥ ೧ ॥

ಸಂಸಾರದಲ್ಲಿ ಕಷ್ಟವನ್ನು ಅನುಭವಿಸುತ್ತಿರುವ ಜನರನ್ನು ನೋಡಿ ಸಜ್ಜನರು ಉಪದೇಶಮಾಡಿರುವುದೇನೆಂದರೆ—

ವೃ॥ ತಿರಿದೀ ಸಂಸೃತಿಯೆಂಬ ಪೇರಡವಿಯೊಳ್ ದುಃಖಾಗ್ನಿ ನಿಸ್ನಂ ನಿರಂ। ತರಮಾಳುತ್ತಿರೆ ಬೆಂದು ನೊಂದು ನವೆಯುತ್ತೆತ್ತಾನುಮೋರೊರ್ಮೆ ನೀಂ ॥ ಕುರುಡಂ ಲಾವಗೆ ಮೆಟ್ಟಿದಂತೆ ದೊರೆಕೊಂಡಿರ್ದಲ್ಪಸೌಖ್ಯಕ್ಕೆ ಮೆಚ್ಚಿರದಿರ್, ಮೆಳ್ಪಡದಿರ್, ತೊಡಂಕಿ ಕಿಡದಿರ್, ಮರ್ತ್ಯೋಹದಿಂ ಜೀವನೇ ॥ —(ಜೀ. ಸಂ)

ಟೀ॥ ಆಳುತ್ತಿರೆ-ವಶಮಾಡಿಕೊಂಡಿರಲು ನವೆಯುತ್ತ—ಸೊರಗುತ್ತ. ಲಾವಗೆ-ಈಳಿಗೆ. ಕುರುಡಂ....ಮೆಚ್ಚಿರದಿರ್-(ಏನನ್ನೋ ಹೆಚ್ಚಿಕೊಳ್ಳಬೇಕೆಂದಿದ್ದ) ಕುರುಡನು (ಹೇಗೋ) ಈಳಿಗೆಯ ಮೇಲೆ ಕಾಲಿಟ್ಟರೂ (ಮುಂದೆ ಏನನ್ನಾದರೂ ಹೆಚ್ಚುವದಕ್ಕೆ ಹೋದರೆ ಅವನು ತನ್ನ ಕೈಯನ್ನೇ ಹೆಚ್ಚಿಕೊಳ್ಳುವನಾದ್ದರಿಂದ) ಅವನಿಗಾಗುವ ಸುಖವು ಅಲ್ಪವೇ ಆಗಿರುವಂತೆ ಸಂಸಾರಸುಖವು ಮುಂದೆ ದುಃಖಕ್ಕೆ ಸಂಚಕಾರವಾದ ಅಲ್ಪಸುಖವೆಂದರಿತು ಅದಕ್ಕೆ ಮರುಳಾಗಬೇಡ.

ಹಾಗಾದರೆ ಮನುಷ್ಯನಿಗೇನು ಮುಖ್ಯವೆಂದರೆ—

ಕಂ॥ ತಿಂಬುದು ಮಲಗುವುದಂಜುವು । ದೆಂಬುದರೊಳ್ಪಶುನರರ್ಗೆ ಭೇದಮದಿಲ್ಲಂ; ॥ ತುಂಬಿದ ತಿಳಿವೆ ಮನುಷ್ಯತೆ । ಗಿಂಬೆನಿಪುದದಿಲ್ಲದಂ ದ್ವಿಪದಪಶುವೆನಿಕುಂ ॥ —(ನ. ಶ)

ಟೀ॥ ತುಂಬಿದ ತಿಳಿವೆ—ಎಲ್ಲೆಲ್ಲಿಯೂ ತುಂಬಿರುವ ಆತ್ಮನನ್ನು ತಿಳಿಯುವದು.

ಆ ಜ್ಞಾನವನ್ನು ಪಡೆದವರಲ್ಲಿ ಭೇದವಿಲ್ಲವೆಂತೆಂದರೆ—

ಸೂ॥ ನಾಸ್ತಿ ತೇಷು ಜಾತಿವಿದ್ಯಾರೂಪಕುಲಧನಕ್ರಿಯಾದಿಭೇದಃ ॥ —(ನಾ. ಭ. ಸೂ)

ಅ॥ ಅವರಲ್ಲಿ ಜಾತಿ, ವಿದ್ಯೆ, ರೂಪು, ಕುಲ, ಧನ, ಉದ್ಯೋಗ— ಇವುಗಳಿಂದಾದ ಯಾವ ಭೇದವೂ ಇಲ್ಲ.

ದೇವರು ಅನುಗ್ರಹವನ್ನು ಮಾಡುವಾಗ ಜಾತಿ ಮೊದಲಾದುವುಗಳನ್ನು ನೋಡುವವನಲ್ಲವೆಂದು ಮತ್ತೊಬ್ಬ ಕವಿ ಹೇಳಿರುವದೇನೆಂದರೆ—

ಶ್ಲೋ|| ಅಯಮುತ್ತಮೋಽಯಮಧಮೋ | ಜಾತ್ಯಾ, ರೂಪೇಣ, ಸಂಪದಾ, ವಯಸಾ, || ಶ್ಲಾಘ್ಯೋಽಶ್ಲಾಘ್ಯೋ ವೇತ್ಥಂ | ನ ವೇತ್ತಿ ಭಗವಾನನುಗ್ರಹಾವಸರೇ || —(ಸು)

ಅ|| ದೇವರು ಅನುಗ್ರಹವನ್ನು ಮಾಡುವಾಗ ಜಾತಿ, ರೂಪು, ಐಶ್ವರ್ಯ, ವಯಸ್ಸು—ಮೊದಲಾದವುಗಳ ದೃಷ್ಟಿಯಿಂದ ಇವನು ಉತ್ತಮನು, ಇವನು ಅಧಮನು, ಇವನು ಮೆಚ್ಚಿಕೆಗೆ ಪಾತ್ರನು, ಇವನು ಮೆಚ್ಚಿಕೆಗೆ ಪಾತ್ರನಲ್ಲ—ಎಂದು ತಿಳಿಯುವದಿಲ್ಲ.

ದೇವರ ಅನುಗ್ರಹವನ್ನು ಪಡೆಯುವ ನಿಶ್ಚಯವನ್ನು ಮಾಡಿದವರೇ ಧನ್ಯರೆಂದು ಕವಿ ಹೇಳಿರುವದೇನೆಂದರೆ—

ಶ್ಲೋ|| ತಜ್ಜ್ಞಾನಂ ಪ್ರಶಮಕರಂ ಯದಿಂದ್ರಿಯಾಣಾಮ್;| ತಜ್ಜ್ಞೇಯಂ ಯದುಪನಿಷತ್ಸು ನಿಶ್ಚಿತಾರ್ಥಮ್;|| ತೇ ಧನ್ಯಾ ಭುವಿ ಪರಮಾರ್ಥನಿಶ್ಚಿತೇಹಾಃ| ಶೇಷಾಸ್ತು ಭ್ರಮನಿಲಯೇ ಪರಿಭ್ರಮಂತಿ || —(ಧ. ಅ)

ಅ|| ಇಂದ್ರಿಯಗಳನ್ನು ಶಾಂತಿಗೊಳಿಸುವದೇ ತಿಳಿವಳಿಕೆ. ಉಪನಿಷತ್ತಿನಲ್ಲಿ ಗೊತ್ತು ಮಾಡಿರುವರ್ಥವೇ ತಿಳಿಯತಕ್ಕದ್ದು. ಆ ನಿಜವಾದ ತತ್ತ್ವವನ್ನು ಪಡೆಯುವ ನಿಶ್ಚಯವನ್ನು ಮಾಡಿದವರೇ ಧನ್ಯರು. ಉಳಿದವರೆಲ್ಲ ಮೋಹದ ಮನೆಯಲ್ಲಿ ಸುತ್ತುತ್ತಿರುತ್ತಾರೆ.

ಆ ಜ್ಞಾನವನ್ನಿಚ್ಛಿಸದ ಮೂಢರನ್ನು ಕುರಿತು ಭಾಗವತರು ನಿಂದಿಸಿ ಹೇಳಿರುವದೇನೆಂದರೆ—

ಮುಖಾರಿ—ಝಂಪೆ

ಮೂಢ ಬಲ್ಲನೆ ಜ್ಞಾನದೃಢಭಕ್ತಿಯ? | ಕಾಡ ಕಪಿ ಬಲ್ಲುದೇ ಮಾಣಿಕದ ಬೆಲೆಯ? || ಪ || ಕೋಣ ಬಲ್ಲುದೆ ವೇದವನೋದಿ ಪಠಿಸಲಿಕೆ? | ಗೋಣಿ ಬಲ್ಲುದೆ ಎತ್ತಿನ ದುಃಖವ? || ಪ್ರಾಣ ತೊಲಗಿದ ದೇಹ ಕಿಚ್ಚಿಂದು ಬಲ್ಲುದೇ? | ಕೊಳ್ಳೇಣಿಯೊಳು ಕುರುಡ ಬಲ್ಲನೆ ಹಗಲು ಇರುಳಾ? || ೧ || ಬಧಿರ ಬಲ್ಲನೆ ಸುಸಂಗೀತಸ್ವಾರಸ್ಯವನು? | ಚದುರನುಡಿಯಾಡಬಲ್ಲನೆ ಮೂಕನು? || ಕ್ಷುಧೆ ಇಲ್ಲದ ಮನುಜ ಅಮೃತಾನ್ನ ಸವಿದವನೆ? | ಮಧುರವಚನವ ಬಲ್ಲನೇ ದುಷ್ಟ ಮನುಜ? || ೨ || ಅಜ ಬರೆದ ಬರೆಹವನು ತೊಡೆಯಬಲ್ಲನೆ ಜಾಣ? | ನಿಜಭಕ್ತಿ ಮುಕ್ತಿ ಸುಖವನ್ನು ಕೊಡುವ || ಭುಜಗೇಂದ್ರಶಯನ ಸಿರಿ ಪುರಂದರ ವಿಠಲನ | ಭಜಿಸಲರಿಯದವ ಬಲ್ಲನೆ ಮುಕ್ತಿಸುಖವ? || —(ದಾ)

ದೇವರ ಅನುಗ್ರಹಕ್ಕೆ ಒಬ್ಬರು ಸುಲಭವಾದ ಉಪಾಯವನ್ನು ಸೂಚಿಸಿರುವದೇನೆಂದರೆ—

ಶ್ಲೋ||ಮಾಯಾಯಾಸಂ ಕುರು ವಾಯುರೋಧನವಿಧೌ; ಮಾರಣ್ಯಮಾಸೇವ್ಯತಾಮ್; | ಕಾಯೋ ವರ್ಜಿತಭೋಜನವ್ರತತಯಾ ಮಾ ಕಾರ್ಶ್ಯಮಾಪಾದಯ;|| ಪಂಚಾಗ್ನಿಪ್ರಭಯೋ ನ ಚರ್ಮದಹನಂ ನೈವಾಚರ ಕ್ಲೇಶದಮ್; | ಸಾನಂದಂ ಕುರು ರಾಮನಾಮಭಜನಂ ಸ್ಯಾತ್ತೇನ ಸರ್ವೇಪ್ಸಿತಮ್ || —(ಸು)

ಅ|| ಪ್ರಾಣಾಯಾಮವನ್ನು ಮಾಡಿ ಆಯಾಸವನ್ನು ಮಾಡಿಕೊಳ್ಳಬೇಡ. ಕಾಡಿಗೆ ಹೋಗಿ ಸೇರಬೇಡ. ಊಟವನ್ನು ಬಿಟ್ಟು ಮೈಯನ್ನು ಸೊರಗಿಸಬೇಡ. ಪಂಚಾಗ್ನಿಗಳ ನಡುವೆ ಕುಳಿತು ದುಃಖಕರವಾಗಿ ಮೈ ಸುಟ್ಟುಗೊಳ್ಳಬೇಡ. ಆನಂದದಿಂದ ರಾಮನಾಮಭಜನೆಯನ್ನು ಮಾಡು. ಅದರಿಂದ ಎಲ್ಲ ಇಷ್ಟಾರ್ಥಗಳೂ ನೆರವೇರುವವು.

ಆ ನಾಮಸ್ಮರಣೆಯು ಈ ಕಲಿಯುಗಕ್ಕಂತು ಎತ್ತಿದ್ದೆಂದು ಒಬ್ಬ ಕವಿ ತೋರಿಸಿರುವದೇನೆಂದರೆ-

ಶ್ಲೋ|| ಕಲೌ ಯುಗೇ ಕಲ್ಮಷಮಾನಸಾನಾಮ್ । ನಾಸ್ತ್ಯತ್ರ ಧರ್ಮಃ ಖಲು ನಿಶ್ಚಯೇನ; || ರಾಮೇತಿ ವರ್ಣದ್ವಯಮಾದರೇಣ । ಸದಾ ಜಪನ್ಮುಕ್ತಿಮುಪೈತಿ ಜಂತುಃ || —(ಸು)

ಅ|| ಕಲಿಯುಗದಲ್ಲಿ ಹೊಲಸುಳ್ಳ ಮನಸ್ಸಿನವರಿಗೆ ನಿಜವಾಗಿ ಬೇರೆ ಧರ್ಮವೇ ಇಲ್ಲ. ರಾಮ ನೆಂಬೆರಡಕ್ಷರವನ್ನು ಜಪಿಸಿದವನು ಮುಕ್ತಿಯನ್ನು ಪಡೆಯುವನು

ನಾಮಸ್ಮರಣೆಯೇ ಪಾಪವನ್ನೆಲ್ಲ ಕಳೆಯುವದೆಂದು ಮತ್ತೊಬ್ಬರು ಹೇಳಿರುವದೇನೆಂದರೆ—

ಶ್ಲೋ|| ಯಾವನ್ನ ಶ್ರೂಯತೇ ರಾಮನಾಮಪಂಚಾನನಧ್ವನಿಃ | ತಾವದ್ಗರ್ಜಂತಿ ಪಾಪೇಭಾಃ ಶರೀರಾರಣ್ಯವಾಸಿನಃ || —(ಸು)

ಅ|| ರಾಮನಾಮವೆಂಬ ಸಿಂಹದ ಗರ್ಜನೆಯು ಕೇಳಬರದೆ ಇರುವವರೆಗೆ ಮಾತ್ರವೆ ಶರೀರ ದಲ್ಲಿರುವ ಪಾಪವೆಂಬ ಆನೆಗಳ ಘೀಂಕಾರ.

ನಾಮಸ್ಮರಣೆಯಿಂದ ಸರ್ವಪಾಪಪರಿಹಾರವಾಗುವದೆಂತೆಂದರೆ—

ಶ್ಲೋ|| ನಾಮ್ನೋಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ । ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ || —(ಸು)

ಅ|| ಪಾಪವನ್ನು ಕಳೆಯುವ ಸಾಮರ್ಥ್ಯವು ಹರಿಗೆ ಎಷ್ಟಿದೆಯೋ ಅಷ್ಟು ಪಾಪವನ್ನು ಮಾಡು ವದಕ್ಕೆ ಯಾವ ಪಾಪಿಗೂ ಸಾಧ್ಯವಲ್ಲ.

ಆ ನಾಮಸ್ಮರಣೆಯಲ್ಲಿ ಯಾವ ರೂಪದಿಂದಿದ್ದರೂ ಕೂಡ ಬಾಧಕವಿಲ್ಲವೆಂದು ಇನ್ನೊಬ್ಬರು ಹೇಳಿರುವದೇನೆಂದರೆ—

ಶ್ಲೋ|| ವನೇ ಚರಾಮೋ, ವಸುಚಾಹರಾಮೋ, । ನದೀಸ್ತರಾಮೋ, ನ ಭಯಂ ಸ್ಮರಾಮಃ, || ಇತಿ ಬ್ರುವಂತೋಽಪಿ ವನೇ ಕಿರಾತಾ । ಮುಕ್ತಿಂ ಗತಾ ರಾಮಪದಾನುಷಂಗಾತ್ || —(ಸು)

ಅ|| ಅಡವಿಯಲ್ಲಿ ಓಡಾಡೋಣ. ಹಣವನ್ನಪಹರಿಸೋಣ. ನದಿಯನ್ನು ದಾಟೋಣ. ಹೆದರದೆ ಇರೋಣ. ಹೀಗೆ ಹೇಳುತ್ತಲಿ ಕಿರಾತರು ಆ ಮಾತುಗಳಲ್ಲಿ ಬಂದ 'ರಾಮ, ರಾಮ' ಎಂಬ ಪ್ರಯೋಗಗಳ ಉಚ್ಚಾರದಿಂದಲಿ ಮುಕ್ತಿಯನ್ನು ಹೊಂದಿದರು.

ಆದ್ದರಿಂದ ವಿವೇಕಿಗಳು ಬಯಸುವದೇನೆಂದರೆ—

ದರ್ಬಾರು—ಆದಿತಾಳ

ನಾಮಸಂಕೀರ್ತನೆ ನಮಗಿರಲೀಗಳು || ಪ || ಮಾಮನೋಹಾರಿ ಶ್ರೀ । ಶೌರಿ ನಾರಾಯಣನ || ಅ. ಪ || ಬೆಳಗಿನ ಜಾವದೊ। ಳೆಳಿಯಲು ನಿದ್ರೆಯು ।

ಬೆಳಕುಗಳೆಲ್ಲಕೂ। ಬೆಳಕಹ ದೇವನ ॥೧॥ ಸ್ನಾನಸಂಧ್ಯಾಜಪ। ಧ್ಯಾನದ ಕಾಲದೆ। ಮೌನಿಹೃನ್ಮಂದಿರ । ಜ್ಞಾನದೀಪಾಯಿತನ ॥ ೨ ॥ ನಡುಹಗಲಾಗಲು । ಪಡೆದುದ ಭುಂಜಿಸಿ । ಅಡಿಗಡಿಗಾ ಜಗ । ದೊಡೆಯಗೋವಿಂದನ ॥ ೩ ॥ ಜೀವನಯಾತ್ರೆಗೆಂ । ದೇ ವ್ಯವಹಾರವ। ನಾವೆಸಗುತ್ತಿರೆ । ಕಾವ ಕರುಣಾಳುವ ॥ ೪ ॥ ಕನಸಿಲಿ ಕಂಡುದ । ನೆನೆಸುತೆ ನಾಪಿರೆ । ಅನಘತತ್ತ್ವಾರ್ಥವ । ನನುಗೊಳಿಪ ಶಂಕರ ॥ ೫ ॥ —(ಅ. ೧೭)

ಟಿ॥ ಮಾಪುನೋಹಾ—ಲಕ್ಷ್ಮೀಪತಿ. ಅನುಗೊಳಿಪ—ಕೂಡಿಸುವ, ಅನುಗ್ರಹಿಸುವ.

ಆದ್ದರಿಂದಲೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು "ಸುಲಭವಾಗಿರುವ ಸಾಧನವನ್ನು ಕೇಳು" ಎಂದು ಮುಂತಾಗಿ ಉಪದೇಶಿಸಿರುವರು. ಹೀಗೆ ನಾಮಸ್ಮರಣೆಯಿಂದ ಉದ್ಧಾರವನ್ನು ಹೊಂದಿದ್ದಕ್ಕೆ ಉದಾಹರಣೆಯಾಗಿ ಕಬೀರದಾಸನ ಆಖ್ಯಾನವು ನಿರೂಪಿಸಲಾಗುವದು.

---

## ಆಖ್ಯಾನ

ಕೀ॥ ಕಾಶಿಯೊಳಗೆ ನೂರಲ್ಲಿಯೆಂಬ ಮುಸ । ಲೇಶನು ನೀಮುಬೀಯೊಡನೆ ॥ ವಾಸಿಸುತಿದ್ದನು ಸಾತ್ತ್ವಿಕತನದೊಳು । ಲೇಸೆನೆ ನಡೆಸುತ ಧರ್ಮವನೆ ॥

ಒಂದು ದಿನ ಏನಾಯಿತೆಂದರೆ—

ಸಾ॥ ಬಂದಿರೆ ಲಾಹರ್‌ತಲಾವಿನೊಳು ತಾ । ನಂದು ತೊಳೆಯೆ ನೂಲನ್ನು ॥ ಕಂದನೊಂದು ಕಾಣಿಸಿತು ದಡದೊಳಾ । ನಂದಗೊಳಿಸಿ ಮನವನ್ನು ॥

ಮಕ್ಕಳಿಲ್ಲದೆ ಯೋಚಿಸುತ್ತಿದ್ದ ಅವನು ಆಗ ನೆನೆಸಿದ್ದು—

ಚೌ॥ ಕೆಸರ ಹುಡುಕಲು ಹಾಲಿಸಬ್ಬಿಯೆ-ವಶಕೆ ಬಂದಂತಿರ್ಪುದು;। ಎಸೆವ ಕಲ್ಲಾಯುತಿರೆ ರತ್ನವೆ-ಹುಸನೆಸಲು ಕೈಸೇರ್ದುದು; ॥ ಪಸಿಸೆ ಗುಡಿಸಲ ಬೇಳ್ಪೆ ಸಗನಾ-ಯುಸದೊಳರಸುನೆ ಕಾಣ್ಬುದು; । ಅಸಮ ಪುಣ್ಯೋದಯವಿದೆನಗೀ-ಶಿಶುಗಳರಗಿಣಿ ದೊರೆದುದು ॥

ಹೀಗೆಂದು ಅದನ್ನು ಮನೆಗೆ ತೆಗೆದುಕೊಂಡು ಹೋಗಿ ನೂರಲ್ಲಿಯು ಆ ಮಗುವಿಗೆ ಕಬೀರನೆಂದು ಹೆಸರಿಟ್ಟು ಮುದ್ದಿನಿಂದ ಸಾಕುತ್ತ ಬಂದನು. ಕಬೀರನು ಬೆಳೆಯುತ್ತ ಬೆಳೆಯುತ್ತ ಸ್ವಭಾವವಾಗಿಯೇ ಯಾವಾಗಲೂ ರಾಮನಾಮವನ್ನುಚ್ಚರಿಸುತ್ತ ಹಿಂದುಗಳನ್ನೂ ಮತ್ತು ಮುಸಲ್ಮಾನರನ್ನೂ ಒಂದಾಗಿ ಕಾಣುತ್ತಿದ್ದನು. ಈ ಉದಾರಸ್ವಭಾವದ ಕಾರಣವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಶ್ಲೋ॥ ಶ್ರೀರಾಮನಾಮ್ನಃ ಕಥನೇನ ಮರ್ತ್ಯೋ | ದುಷ್ಟೋಽಪಿ ಭಿನ್ನಾತ್ಮಕತಾಂ ವಿಹಾಯ ॥ ಐಕ್ಯಂ ಸಮೇತೀತಿ ವಿತರ್ಕಯೇಽಹಂ | ಯಸ್ಮಾತ್ಕುಜನ್ಮಾಽಪಿ ನಾಕುಜನ್ಮಾ ॥ —(ಸು. ಲಾ)

ಅ॥ ರಾಮನಾಮದ ಸ್ಮರಣೆಯಿಂದ ದುಷ್ಟನಾದವನು ಕೂಡ ಭೇದಬುದ್ಧಿಯನ್ನು ಬಿಟ್ಟು ಒಂದಾಗಿ ನೋಡುತ್ತಾನೆಂದು ತೋರುತ್ತದೆ. ಹೇಗೆಂದರೆ (ನಾ+ಕುಜನ್ಮಾ) ನೀಚಜಾತಿಯ ಮನುಷ್ಯನಾದ ವಾಲಿಯು (ನಾಕುಜನ್ಮಾ) ಉತ್ತಮದಲ್ಲಿ ಹುಟ್ಟಿದ ಋಷಿಯೆಂದೆನಿಸಿಕೊಂಡನು. (ನಾ, ಕುಜನ್ಮಾ—ಎಂಬೆರಡು ಶಬ್ದಗಳು ಮೊದಲು ಬೇರೆಬೇರೆಯಾಗಿದ್ದು ಆಮೇಲೆ ಸಮಸ್ತಪದವಾಗಿ ಒಂದೇ ಆದ್ದರಿಂದ ಭೇದಬುದ್ಧಿಯನ್ನು ಬಿಟ್ಟು ಒಂದಾಗಿ ನೋಡಿದಂತಾಯಿತು.)

ಈ ಪ್ರಕಾರ ರಾಮನಾಮದ ಸೆಳೆತಕ್ಕೆ ಸಿಕ್ಕಿದ ಕಬೀರನು ಯಾವಾಗಲೂ ಜನರ ಗುಂಪಿಗೆ ದೂರವಾಗಿಯೇ ಇರುವದೆಂತು ಕಾಣುತ್ತಿತ್ತೆಂದರೆ—

ಭಾ॥ ಬಾಳೆ ಬೋರೆಗಳೊಡನೆ ಬೆಳೆಯುತ | ಬಾಳುವವೆ? ಸೀಗೆಗಿಡದೊಡನೆ ಸ | ಮ್ಮೇಳವೇ? ಲೋಭಿಯು ಸುದಾರನು ಸೇರಿಕೊಂಡಿಹನೇ? ॥ ಕೀಳು ಕುರುಬನು ಪಂಡಿತನ ಮುಂ | ದಾಳೆ? ಭಕ್ತ ಕಬೀರನಾ ಪರಿ | ಕಾಳುಮೂಳರ ಸಂಗದೊಳು ಕಳೆಯುವನೆ ಕಾಲವನು? ॥

ಅವನು ಹಿಂದೂಜನರೊಡನೆ ಬೆರೆತಾಗ ಪುರಾಣಪುಣ್ಯಕಥೆಗಳ ಮಾತಾಡುತ್ತ ಆ ಮೇಲೆ ಏಕಾಂತದಲ್ಲಿ ಕುಳಿತು ಹಂಬಲಿಸುತ್ತಿದ್ದದ್ದೇನೆಂದರೆ—

ಖರಹರಪ್ರಿಯ—ರೂಪಕ

ಮಂತ್ರವೆಂದು ಸಿದ್ಧಿಸುವದೊ। ಶ್ರೀರಾಮತಾರಕ ॥ ಪ ॥ ಮಂತ್ರಗಳೊಳಗೆಲ್ಲ ಮಹಾ | ಮಂತ್ರವೆಂದು ಹೆಸರು ಪಡೆದ ॥ ಅ. ಪ ॥ ಗಿರಿಶನು ಬಹುಪ್ರೀತಿಯಿಂದ | ಗಿರಿಜೆಗೊರೆದುದಾಗಿ ಮತ್ತೆ ॥ ನರರಿಗೆಲ್ಲ ಕಾಶಿಯಲ್ಲಿ | ಮರಣಕಾಲದಲ್ಲಿ ಪೇಳ್ವ ॥ ೧ ॥ ಸುರನರಕಿಂಪುರುಷರೆಲ್ಲ | ಪರಮಪ್ರೀತಿಯಿಂದಲಿ ॥ ಭರದಿ ಜಪಿಸಿ ಸೌಖ್ಯದಿಂದ | ಮೆರೆಯುವಂತೆ ಮಾಡಿರುವಾ ॥ ೨ ॥ ಮರವೆಯೆಂಬ ಕತ್ತಲೆಯ | ತರಣಿಯಂತೆ ಓಡಿಸುವ ॥ ಪರಮತತ್ತ್ವವನ್ನು ತಿಳಿಸಿ | ವರಚಿತ್ಸುಖವೀಯುವಂಥ ॥ —(ಭಕ್ತಿ. ೧೯)

ಹೀಗೆ ಅವನು ಹಂಬಲಿಸುತ್ತಿರುವಾಗ ಅವನಿಗೆ ನೆನವಾದದ್ದೇನೆಂದರೆ—

ತ್ರಿ॥ ಬಳ್ಳಿಗುರುಡರು ಕೂಡಿ ಹಳ್ಳವನು ಬೀಳ್ವಂತೆ | ಒಳ್ಳಿಯ ಗುರುವಿನುಪದೇಶವಿಲ್ಲದಿರೆ | ಎಲ್ಲಿಯದು ಮುಕ್ತಿ? ಸರ್ವಜ್ಞ ॥ —(ಸ. ವ)

ಆದ್ದರಿಂದ ಗುರುವಿಲ್ಲದ ತನ್ನ ಬಾಳು ವ್ಯರ್ಥವೆಂದು ಯೋಚಿಸಿದ್ದು—

ದಿಂ॥ ಬರಿದೆ ಬೇಯಿಸಿದುಪ್ಪಿಲ್ಲದಡಿಗೆಯಂತೆ | ಬರುವ ನೀರೇ ಇಲ್ಲದ ತಟಾಕದಂತೆ ॥ ತರಿಯೆ ಕಾಳೇ ಇಲ್ಲದಿಹ ತೆನೆಯ ಕಂತೆ | ಗುರುವನುಗ್ರಹವೇ ಇಲ್ಲದವನ ಚಿಂತೆ ॥

ಆಗಿನ ಕಾಲದಲ್ಲಿ ಶ್ರೀರಾಮಾನುಜಪಂಥದವರಾದ ಶ್ರೀರಾಮಾನಂದಸ್ವಾಮಿಗಳು ಉದಾರ ಬುದ್ಧಿಯಲ್ಲಿ ಹೆಸರುಗೊಂಡವರಾಗಿದ್ದರೂ ಕೂಡ ಕಬೀರನು ಬಂದು ಯಾಚಿಸಿದಾಗ ಹೇಳಿದ್ದು—

ಸಾಂ|| ನೆಲವ ನೋಡುತ ಬಿತ್ತಬೇಕು; ಪಾತ್ರವ ನೋಡಿ | ಸಲಪಿಂಡವಗೆ ನೀಡಬೇಕು; || ಕುಲಜಗೆ ಕನ್ಯೆಯ ಕೊಡುವಂತೆ ಮಂತ್ರವ | ತಿಳಿದು ಕುಲಜಗೀಯಬೇಕು ||

ಎಂದು ನಿರಾಕರಿಸಲು ಮುಂದೇನು ಮಾಡಬೇಕೆಂದು ಯೋಚಿಸಿ ಕಬೀರನು—

ಕಂ|| ಮಲಗಿದವರೇಳುತ್ತ | ಬೆಳಗಿನೊಳು ಬರುವಾಗ | ತಲಬಾಗಿಲೊಳಗೆ ಮುದುರಿದ್ದು ತಾನು || ಸಲೆ ತಾಕಲವರ ಪದ | ನೆಲೆ ರಾಮರಾಮೆಂದು | ತೊಲಗಲವರತ್ತ್ಯಶಿವಸಿತ್ತ್ಯಲೆದ್ದು ||

ಆಮೇಲೆ ಅವನು—

ಶ|| ತುಲಸಿಯ ಮಣಿಗಳ | ಗಳದೊಳು ಹಾಕುತ | ಸಲೆ ಹಣೆಯೊಳು ನಾಮವನಿಟ್ಟು || ಸಲವಿಂ ಜಪಿಸುತ | ಜಲಜನೇತ್ರನನು | ಹೊಳೆದ ನವನುಸಂತಸಬಟ್ಟು ||

ಇದರಿಂದ ಜನರಿಗಾದ ಅಸಮಾಧಾನವೇನೆಂದರೆ—

ಭೋ|| ಹಿಂದುಧರ್ಮವನ್ನು ಮುಸಲ | ಕೊಂದನೆಂದು ತಿಳಿಯುತಾಗ | ಹಿಂದುಜನರಸಹ್ಯಪಟ್ಟುಕೊಂಡರಾಗಲೆ || ಹಿಂದುಧರ್ಮವನ್ನು ಹಿಡಿದು | ಕೊಂದನೆಮ್ಮನೆಂದು ಮುಸಲ | ರೆಂದರವನನಾಗ ತುಚ್ಛನೆಂದು ಬೇಗಲೆ ||

ಅವರಿಬ್ಬರೂ ಬಂದು ಅವನ ವೃತ್ತಾಂತವನ್ನು ಶ್ರೀರಾಮಾನಂದರಿಗೆ ತಿಳಿಸಲಾಗಿ ಅವರು ಅವನನ್ನು ಕರೆಸಿ ಈ ಅತ್ಯಾಚಾರವನ್ನೇಕೆ ಮಾಡಿದೆಯೆನ್ನಲು ಅವನು ತನಗೆ ಅವರ ಪಾದಸ್ಪರ್ಶವೂ ಉಪದೇಶವೂ ಆದ ಪ್ರಸಂಗವನ್ನು ನೆನಪುಗೊಡಲು ಆಗ ಆಶ್ಚರ್ಯಗೊಂಡು ಉದಾರಬುದ್ಧಿಯಿಂದ ಅವನನ್ನು ತಮ್ಮ ಶಿಷ್ಯವರ್ಗಕ್ಕೆ ಸೇರಿಸಿಕೊಂಡು ಹೇಳಿದ್ದು—

ಶ್ಲೋ|| ಅಹೋ! ಸದಾರಾಮಪದಂ ಶ್ರಿತಸ್ಯ | ಕುಜನ್ಮನಃ ಸದ್ರಸಸಂಪ್ಲುತಸ್ಯ || ಸಮುದ್ಭವೇತ್ಸತ್ಸುಮನಸ್ಕತಾऽಸ್ಯ | ನಿದರ್ಶನಾರ್ಥಂ ಯವನಃ ಕಬೀರಃ || —(ಸು. ಲಾ)

ಅ|| (೧) (ಸದಾ + ರಾಮಪದಂ) ಯಾವಾಗಲೂ ರಾಮಚಂದ್ರನ ಪಾದಗಳನ್ನು ಆಶ್ರಯಿಸಿಕೊಂಡಿರುವವನು ನೀಚಕುಲದಲ್ಲಿ ಹುಟ್ಟಿದ್ದರೂ (ಸದ್ರಸಸಂಪ್ಲುತಸ್ಯ) ಬ್ರಹ್ಮಾನಂದವು ತುಂಬಿದ್ದರೆ ಅಂಥವನಲ್ಲಿ (ಸತ್ಸುಮನಸ್ಕತಾ) ಒಳ್ಳೆ ಸಾಧುತ್ವವು ಉತ್ಪನ್ನವಾಗುವದೆಂಬುದಕ್ಕೆ ಯವನನಾದ ಕಬೀರನೇ ಒಂದುದಾಹರಣೆ. (೨) (ಸತ್ + ಆರಾಮಪದಂ) ಯಾವಾಗಲೂ ಒಳ್ಳೆ ತೋಟವನ್ನಾಶ್ರಯಿಸಿಕೊಂಡು ಒಳ್ಳೆ ರಸದಿಂದ ಕೂಡಿರುವ (ಕುಜನ್ಮನಃ) ಮರಕ್ಕೆ (ಸತ್ಸುಮನಸ್ಕತಾ) ಒಳ್ಳೆ ಹೂವಿನ ಗೊಂಚಲಾಗಬಾರದೇನು? ಇದನ್ನು ತೋರಿಸುವದಕ್ಕೆ ಕಬೀರನು ಯವನನಾಗಿದ್ದಾನೆ.

ಜಗತ್ತಿನಲ್ಲಿ ಗುರುಗಳ ಉಪದೇಶವು ದೊರೆಯುವುದು ದೊಡ್ಡ ಮಾತಲ್ಲ. ಅದರ ತತ್ತ್ವಾರ್ಥವನ್ನು ಮನನಮಾಡುವದು ಮುಖ್ಯ. ಕಬೀರನು ತನ್ನ ವಿಚಾರಶಕ್ತಿಯನ್ನು ಎಷ್ಟು ಚೆನ್ನಾಗಿ ಉಪಯೋಗಿಸುತ್ತಿದ್ದನೆಂಬುದಕ್ಕೆ ಒಂದು ನಿದರ್ಶನವನ್ನು ನೋಡಿ—

ಭಾ॥ಬೀಸುಗಲ್ಲೊಳು ಕಾಳ ನೋಡುತೆ। ಗಾಸಿಗೊಂಡದನೆತ್ತಿ ನಡುವಣ। ದೇಶದಲ್ಲಿಹ ಗೂಟವನು ನಂಬಿದರೆ ಸುಖವೆಂದು ॥ ಆಸೆಗೊಂಡಿನ್ನಿಹಪರಂಗಳ । ಬೀಸುಗಲ್ಲಿಂ ಪಡೆಯದಿರಲು ವಿ । ನಾಶವನು ಮಾನಿಸರು ದೇವರ ನಂಬಬೇಕೆಂದ ॥

ಹೀಗೆ ವಿಚಾರಮಾಡುತ್ತ ಮಾಡುತ್ತ ಭಗವದ್ವಿಚಾರವೇ ಅವನಲ್ಲಿ ಎಷ್ಟು ಜಾಗರೂಕವಾಗಿತ್ತೆಂದರೆ—ದಿಗ್ದಂತಿಪಂಡಿತನಾದ ಸರ್ವಜಿತನೆಂಬ ಬ್ರಾಹ್ಮಣನ ಮುಂದೆ ಗುರ್ವಾಜ್ಞೆಯಂತೆ ವಾದಕ್ಕಾಗಿ ಕುಳಿತಾಗ ನೀನು ಯಾರೆಂದು ಕೇಳಿದ ಬ್ರಾಹ್ಮಣನ ಪ್ರಶ್ನೆಗೆ ಕಬೀರನು ಉತ್ತರಕೊಟ್ಟದ್ದು—

ಸೀ॥ ಪಾರಪಲ್ಲುಗ ರೀತಿಯೊಳು ಹಾಸುಹೊಕ್ಕುಗಳ-ಸೇರಿಸುತ ತನ್ನಿಚ್ಛೆ ಬಂದ ತೆರದಿ । ತೋರುವೀ ಭೂಮಿಯಾಕಾಶಗಳ ನೇಯಿಗೆಯ-ಚಾರುಶಾಲೆಯನೆ ಮಾಡುತ್ತ ಮುದದಿ। ಬಾರಿಬಾರಿಗೆ ಚಂದ್ರಸೂರ್ಯರೆಂಬೆರಡನ್ನು-ಮೀರೆದಪ್ಪದ ಲಾಳಿಗೈದು ಜವದಿ । ಈರೇಳುಲೋಕಂಗಳೆಂದೆಂಬ ವಸ್ತ್ರವನು-ಚಾರು ಚಾತುರ್ಯದಿಂ ನೆಯ್ವಂದದಿ ॥ ಭೂರಿ ಮಹಿಮೆಯನು ತೋರಿರ್ಪುದನ್ನು । ಧಾರಿಣಿಯ ಜನನಾವನರಿವನಿನ್ನು ?। ವಾರಿಜಾಂಬಕನೆನಿಸಿದಾತನನ್ನು । ಸಾರಿ ಸೇವಿಸುತಿಹ ಕಬೀರನಿವನು ॥

ಕಬೀರನು ತನ್ನ ತಂದೆಯ ಕಾಲದಿಂದ ಬಂದ ನೇಗೆಯ ಉದ್ಯೋಗವನ್ನು ನಡೆಸುತ್ತಿದ್ದರೂ ಅವನ ಮನಸ್ಸೆಲ್ಲ ರಾಮನಲ್ಲಿರುತ್ತಿತ್ತು. ಅವನು ಆನಂದಪರವಶನಾಗಿ ಕುಳಿತು ಬಿಟ್ಟರೂ ಯಾರಿಂದಲೋ ಕೆಲಸವಾಗಿ ನೆಯಿಗೆ ಮುಗಿಯುತ್ತಿತ್ತು. ಒಂದು ದಿನ ಮಗ್ಗದ ಮೇಲೆ ಕುಳಿತು ತಾಳಕ್ಕೆ ತಕ್ಕ ಹಾಗೆ ಲಾಳಿಗಳನ್ನು ಹಾಕುತ್ತ ರಾಮಭಜನೆಯನ್ನಾರಂಭಿಸಿದ್ದಾನೆ—

ರ॥ ಶ್ರೀವನರಾಶಿನಿಕೇತನರಾಮ । ಸೇವಿತಪದ್ಮನಿಕೇತನರಾಮ । ಕೌಸಲ್ಯಾಪ್ರಿಯಬಾಲಕರಾಮ । ಕೌಶಿಕಮಖಪರಿಪಾಲಕರಾಮ । ಧರಣಿಸುತಾಹೃದ್ರಂಜನರಾಮ । ಪರಶುರಾಮಮದಭಂಜನರಾಮ । ಜನಕದಶರಥಮುದಾಕರರಾಮ । ಜನಹೃದ್ವನಧಿಸುಧಾಕರರಾಮ । ಸೀತಾಲಕ್ಷ್ಮಣಸಂಯುತರಾಮ । ಪೂತಮುನೀಶ್ವರಸನ್ನುತರಾಮ । ಘನವನವಾಸಪ್ರಸ್ಥಿತರಾಮ । ಅನಿಶವಿಚಿಂತಿತದಶರಥರಾಮ । ಅನುಜಾರ್ಚಿತನಿಜಪಾದುಕರಾಮ । ಮುನಿಸಂಕುಲಸಮ್ಮೋದಕರಾಮ । ವರಪಂಚವಟೀಮಂದಿರರಾಮ । ಖರಶೂರ್ಪಣಖಾಮದಹರರಾಮ । ಮಾರೀಚಮಹಾಸುರವಧರಾಮ । ಧೀರಜಟಾಯುಗತಿಪ್ರದರಾಮ । ಸೀತಾನ್ವೇಷಣಕೌತುಕರಾಮ । ದೈತ್ಯಕಬಂಧಚ್ಛೇದಕರಾಮ । ಜ್ಞಾನಿಮರುತ್ಸುತಸಮ್ಮುದರಾಮ । ಮಾನಿತಸುಗ್ರೀವೇಷ್ಟದರಾಮ । ನಿರುಪಮಕಪಿಬಲಸೇವಿತರಾಮ । ವರಚೂಡಾಮಣಿಹರ್ಷಿತರಾಮ । ಸಾಗರಸೇತುನಿಬಂಧನರಾಮ । ರಾಘವ ರಾವಣಭಂಜನರಾಮ । ಸೀತಾಲಾಭಶುಭಾನ್ವಿತರಾಮ । ತಾತದಶರಥನಿರೀಕ್ಷಿತರಾಮ । ಭರತಾನಂದಕ ಭವಹರರಾಮ । ವರ

ರತ್ನಾಸನಸುರುಚಿರರಾಮ । ಘನಪಟ್ಟಾಲಂಕೃತರಘುರಾಮ । ಜನನಾಥ ಕುಲಸ್ತುತಜಯರಾಮ ॥ —(ಕ. ನಾ)

ಈ ಆನಂದದಲ್ಲಿ ಅವನು ಮಗ್ನನಾಗಿರುವಾಗ ರಾಮಚಂದ್ರನು ತಾನೇ ವೇಷಾಂತರದಿಂದ ಬಂದು ಆ ವಸ್ತ್ರವನ್ನು ನೆಯ್ದುದ್ದರಿಂದ ಅದು ಬಹು ಬೆಲೆ ಬಾಳುವ ವಸ್ತ್ರವಾಗಿದೆ. ಅದನ್ನು ಮಾರಾಟಕ್ಕೆಂದು ಪೇಟೆಗೆ ತೆಗೆದುಕೊಂಡು ಹೋಗಿ ಅವನು ಆ ನಾಮಸ್ಮರಣೆಯ ಆವೇಶದ ಭರದಲ್ಲಿ ಜನರನ್ನು ಕುರಿತು ಹೇಳಿದ್ದು—

ಶ್ಲೋ॥ ಪತಿತಾನಾಂ ಸಂಸಾರಾಂ । ಧತಮಸಕೂಪೇ ಪಿನಷ್ಟದೃಷ್ಟೀನಾಮ್ ॥ ಏಕಂ ಸುಹೃದುಪದಿಷ್ಟಮ್ । ಕಷ್ಟಹರಂ ಚಕ್ರಿಣೋ ಹಿ ಗುಣಭಜನಮ್ ॥ —(ಸು. ಲಾ)

ಅ॥ ಸಂಸಾರವೆಂಬ ಕಗ್ಗತ್ತಲೆಯ ಹಾಳು ಬಾವಿಯಲ್ಲಿ ಬಿದ್ದು ಕಣ್ಣು ಕಳೆದುಕೊಂಡಿರುವವರಿಗೆ ದೊಡ್ಡವರು ಹೇಳಿರುವ ಒಂದುಪಾಯವೇನೆಂದರೆ (೧) (ಚಕ್ರಿಣಃ) ಚಕ್ರಪಾಣಿಯಾದ ವಿಷ್ಣುವಿನ (ಗುಣಭಜನಂ) ಗುಣಗಳನ್ನು ಭಜಿಸುವದು ಸಮಸ್ತಕಷ್ಟಗಳನ್ನೂ ಪರಿಹಾರಮಾಡುವದು. (೨) (ಚಕ್ರಿಣಃ) ರಾಟೆಯಿಂದ ತೆಗೆದ (ಗುಣಭಜನಮ್) ನೂಲಿನ ಬಟ್ಟೆಯನ್ನು ಧರಿಸುವದು. .... ....

ಅಲ್ಲಿಯೂ ಇವನು ಪರಮಾತ್ಮನ ಭಜನೆಯನ್ನು ಮಾಡುತ್ತ ಅಂತರ್ಮುಖಿಯಾಗಿರಲು ಬಂದ ಬಂದವರೆಲ್ಲ ಆ ಬಟ್ಟೆಯನ್ನು ನೋಡಿ ಅದು ತಮ್ಮ ಯೋಗ್ಯತೆಗೆ ಬಹು ಹಿರಿದಾಯಿತೆಂದು ಹೋದರು. ಹೀಗೆ ಅದರ ವ್ಯಾಪಾರವಾಗದೆ ಇರುವಾಗ ರಾಮಚಂದ್ರನೇ ಒಬ್ಬ ಬ್ರಾಹ್ಮಣನಾಗಿ ಚಳಿಯಿಂದ ನಡುಗುತ್ತ ಬಟ್ಟೆಯನ್ನು ಬಯಸುವವನಾಗಿ ಕಬೀರನ ಬಳಿಗೆ ಬಂದದ್ದೆಂತಿತ್ತೆಂದರೆ—

ಚೌ॥ ಬಲಿಗನುಗ್ರಹದೋರೆ ವಾಮನ–ನೊಲಿಯುತೈತಂದಂದದಿ । ಸಲಿ ಪರೀಕ್ಷಿಸಲಂಬರೀಷನ–ಛಲದ ಮುನಿ ಬಂದಂದದಿ ॥ ಕೊಳಲು ಸಿರಿಯಾಳನನು ಶಿವ ತ–ನ್ನಳವ ತೋರಿಸಿದಂದದಿ।ನೆಲದ ಹಾರುವನಾ ಕಬೀರನ–ಬಳಿಗೆ ಬಂದನು ಚಂದದಿ ॥

ಆ ಬ್ರಾಹ್ಮಣನು ಬಂದು ಬೇಡಿದಾಗ—

ಸಾ॥ ಮರುಗುತವನಿಗಾಗಲೆ ಆ ವಸ್ತ್ರವ । ಹರಿಯುತೆರಡು ಪಾಲಾಗಿ ॥
ಹರುಷದೊಳಿತ್ತನು ಹಾರುವನಿಗೆ ಹರಿ । ಸ್ಮರಣೆಯೊಳಗೆ ಮನ ಕರಗಿ ॥

ಅದನ್ನು ತೆಗೆದುಕೊಂಡು ಹೋದ ಬ್ರಾಹ್ಮಣನು ಕಬೀರನಿಗೆ ವ್ಯಾಪಾರವಾಗದಿರುವ ಯೋಚನೆಯನ್ನು ತಪ್ಪಿಸಲು ಫಕೀರನಾಗಿ ಮತ್ತೆ ಬಂದು ಮುಸಲ್ಮಾನರ ಸ್ವಭಾವಕ್ಕನುಸರಿಸಿ ಕಬೀರನನ್ನು ಆಕ್ಷೇಪಿಸಿ ಕೇಳಿದ್ದು—

ಸಾ॥ ಸ್ಮರಿಸುವೆಯೇಕೆ? ಸಾಕಾರವನಾಕಾರ । ವಿರಹಿತನಲ್ಲವೆ? ಅವನು ॥

ಅದಕ್ಕೆ ಕಬೀರನ ಉತ್ತರ—

ಸಾ॥ ಎರಡಲ್ಲವವು ತುಪ್ಪ ಹೆತ್ತಿದ್ದರೇನದು । ಕರಗಿರ್ದಮಾತ್ರದಿಂದೇನು ॥

ಹೀಗೆ ಹೇಳಿ ಈ ರೀತಿಯಲ್ಲಿ ಭಗವದ್ವಿಚಾರವನ್ನು ತೆಗೆದದ್ದಕ್ಕಾಗಿ ಅವನಿಗೆ ಉಳಿದರ್ಧವಸ್ತ್ರವನ್ನೂ ಕೊಟ್ಟು ಆಮೇಲೆ ಬರಿಗೈಯಲ್ಲಿ ಮನೆಗೆ ಹೋದರೆ ತಾಯಿ ಬಯ್ಯುವಳೆಂದು ಅಲ್ಲಿಯೇ

ತನ್ನ ಭಜನೆಯಲ್ಲಿ ತಾನಿರಲು ರಾಮಚಂದ್ರನು ರೂಪಾಂತರದಿಂದ ಕಬೀರನ ಮನೆಗೆ ಹೋಗಿ ತಾನು ಕೊಂಡುಕೊಂಡ ವಸ್ತ್ರದ ಬೆಲೆಯೆಂದು ಹೇಳಿ ಕೈತುಂಬ ಹಣವನ್ನು ಕೊಡುತ್ತಲೆ ಆ ದಿನದ ಮಗನ ಸಂಪಾದನೆಗೆ ಸಂತುಷ್ಟಳಾದ ತಾಯಿಯು ಮಗನನ್ನು ಉಪಚರಿಸಬೇಕೆಂದು ಹುಡುಕಿಕೊಂಡು ಬಂದು ನಡೆದ ಸಂಗತಿಯನ್ನು ಹೇಳುತ್ತಲೆ ಕಬೀರನು ಅದು ದೇವರಾಟವೆಂದು ದೇವರ ಮೇಲೆ ಇನ್ನಷ್ಟು ಪ್ರೇಮವನ್ನಿಟ್ಟಿರುವಾಗ ಅವನ ಹೆಚ್ಚುಗಾರಿಕೆಯನ್ನು ಸಹಿಸದ ಕೆಲವರು ಒಂದು ಕುತಂತ್ರವನ್ನು ಹೂಡಿದ್ದಾರೆ. ಅದು ಅವರ ಸ್ವಭಾವ—

ಶ್ಲೋ॥ ಬಹುನಿಷ್ಕಪಟದ್ರೋಹೀ ಬಹುಧಾನ್ಯೋಪಘಾತಕಃ । ರಂಧ್ರಾನ್ವೇಷೀ ಚ ಸರ್ವತ್ರ ದೂಷಕೋ ಮೂಷಕೋ ಯಥಾ ॥ —(ಸು)

ಅ॥ ದೂಷಕರು ಇಲಿಯಂತೆ. ಹೇಗೆಂದರೆ ಇಲಿಯು (ಬಹು+ನಿಷ್ಕ+ಪಟದ್ರೋಹೀ) ಬಹಳ ಬೆಲೆಯುಳ್ಳ ವಸ್ತ್ರಕ್ಕೆ ಕೇಡು ಮಾಡುವದು; (ಬಹು+ಧಾನ್ಯ+ಉಪಘಾತಕಃ) ಬಹಳ ಧಾನ್ಯವನ್ನು ನಾಶಮಾಡುವದು; (ರಂಧ್ರ+ಅನ್ವೇಷಿ) ಎಲ್ಲೆಲ್ಲಿಯೂ ಬಿಲವನ್ನು ಮಾಡಲು ಹುಡುಕುತ್ತಿರುವದು. ದೂಷಕನು (ಬಹು+ನಿರ್+ಕಪಟ+ದ್ರೋಹೀ) ಸ್ವಲ್ಪವೂ ಕಪಟವಿಲ್ಲದ ಸಜ್ಜನರಿಗೆ ದ್ರೋಹಮಾಡುವನು; (ಬಹುಧಾ+ಅನ್ಯ+ಉಪಘಾತಕಃ) ಬಗೆ ಬಗೆಯಾಗಿ ಇತರರಿಗೆ ಕೇಡುಮಾಡುವನು; (ರಂಧ್ರಾನ್ವೇಷೀ) ಎಲ್ಲ ವಿಷಯಗಳಲ್ಲಿಯೂ ಹುಳುಕನ್ನು ಹುಡುಕುವನು.

ಅವರಿಂದಾದದ್ದೇನೆಂದರೆ—

ಕೀ॥ ಮೋಸಗಾರನವನೆಂದೆಲ್ಲರೂ ಮ | ಹೀಶನಿಗರುಹಿದೊಡವನನ ॥ ದೇಶದಿಂದಲೇ ಹೊರಟಿಸಿದನು ಸ | ರ್ವೇಶನನುಗ್ರಹ ಪಡೆದವನ ॥

ಅಲ್ಲಿಂದ ಹೊರಬಿದ್ದ ಅವನು ಧೈರ್ಯವನ್ನು ತಂದುಕೊಂಡದ್ದು—

ತೋಡಿ—ರೂಪಕ

ಮನವೆ ನೀನು ಬೆದರಬೇಡ; | ಜನಕಜೇಶನು ಕಾಪಾಡುವನು ॥ ಪ ॥ ನಿನಗೆ ಶರಣು ಬಂದೆನೆಂದರೆ | ಅನುದಿನ ನಾ ಪೊರೆವೆನೆಂಬನು ॥ ಅ. ಪ ॥ ಶರಣು ಶರಣೆನುತ್ತ ಬಂದು | ಚರಣಯುಗಳದಲ್ಲಿ ತಮ್ಮ | ಶಿರಗಳನಿಟ್ಟವರನೆಲ್ಲ | ಪೊರೆವುದಕೆಂದು ॥ ಪುರವನೆ ನಿಮಿಷಾರ್ಧದಲ್ಲಿ | ಸುರನಾಥನ ಲೋಕಕೊಯ್ದ | ಪರಮಪುರುಷ ಪತಿತಪಾವನ | ಕರುಣಾನಿಧಿ ನಿನ್ನ ಬಿಡನು ॥ ೧ ॥ ಶಿಲೆಯ ರೂಪವನ್ನು ತಾಳಿ | ದಲಘುದೋಷಿಯಾದ ಸ್ತ್ರೀಯನು | ಜಲಜಸದೃಶವಾದ ಪಾದ | ತಲದೊಳು ಮುಟ್ಟಿ ॥ ಲಲನೆಯ ಮಾಡುತ್ತ ಭೂ | ವಲಯದಿಂದ ಸ್ತುತಿಸಿಕೊಂಡ | ಕಲಿಮಲಾಪಹ ಜಲಜಮಿತ್ರ | ಕುಲಲಲಾಮನು ನಿನ್ನ ಬಿಡನು ॥ ೨ ॥ ಪರಿಪರಿಸೇವೆಯ ಗೈದಾ | ಹರಿನಾಯಕಗೊಲಿಯುತವನ | ಚಿರಜೀವಿಯ ಮಾಡಿ ಮತ್ತೆ ಪರಮಾದರದಿ ॥ ಸುರನರರಿಗಸಾಧ್ಯವಾದ | ಪರತರವಹ ಚಿದ್ರೂಪದ | ಪರಿಯ ತೋರಿ ಪೊರೆದ ನೀತಾ | ಪರಮೂರುತಿ ನಿನ್ನ ಬಿಡನು ॥ —(ಭಕ್ತಿ. ೧೬)

ಅದುವರೆಗೇ ಪ್ರಸಿದ್ಧಿಗೆ ಬಂದಿದ್ದ ಅವನ ಮಹಿಮೆಗಳೇನೆಂದರೆ—

ಭಾ॥ ಮಗನ ತಲೆಯನು ಕೊಯ್ಯುತ, ಹಿಂ। ದೆಗೆಯದಿನಿಯಳನಡವಿ ಡುತ, ಬಹು । ಬಗೆಯ ವಸ್ತುವ ತಂದತಿಥಿಗಳಿಗಿಟ್ಟನೆಂದೆನುತ, ॥ ಬಗೆಗೊಡದೆ ವೇಶ್ಯೆಯ ವಿಲಾಸಕೆ । ಜಗದೊಡೆಯನೆಡೆಗವಳನಟ್ಟುತ, । ವಿಂಗೆ ಜಿತೇಂದ್ರಿಯ ತನವ ತೋರುವನೆನ್ನುವರು ಸತತ ॥

ಆಮೇಲೆ ಅವನು ತನಗಾದ ದೇವರುಪದೇಶವೆಂದು ಹೇಳಿದ್ದು—

ರ॥ ಎಲೆ ಮನುಷ್ಯನೆ, ನನ್ನನೆಲ್ಲಿ ಹುಡುಕುವೆ? ನೀನು; । ಬೆಳಗುತಿಹೆ ನಿನ್ನ ಹೃದಯದೊಳು ನಿತ್ಯವು ನಾನು; । ಕೈಲಾಸದೊಳು, ಕಾಬದೊಳು, ನೋಡೆ ನಾನಿಲ್ಲ; । ಕೇಳು ಗುಡಿಯೊಳು ಮಸೀದಿಯೊಳಗಡಗಿಹನಲ್ಲ; । ಕರ್ಮದೊಳ ಗಿಲ್ಲವಾಚಾರವರ್ಗದೊಳಿಲ್ಲ; । ಪೇರ್ಮೆಯಾ ಯೋಗಂಗಳಿಗೆ ದಕ್ಕುನವನಲ್ಲ; । ಎಲೆ ಕಬೀರಾ, ಹುಡುಕಿದವರಿಗೊಲಿವಂಥವನು । ತಿಳಿ ನೀನು ಪ್ರಾಣಕ್ಕೆ ಪ್ರಾಣ ನಾಗಿಹೆ ನಾನು ॥

ಹೀಗೆಂದು ಅವನು ಮಾಡಿದ ಉಪದೇಶಗಳೇನೆಂದರೆ—

ರ॥ ಸುರಪುರವೆಂದಾನಂದಿಸಬೇಡ; । ನರಕವೆಂದು ನೀ ಭಯಪಡಬೇಡ; । ಏಳಿಗೆಯಾಗಲು ಹಿಗ್ಗಲು ಬೇಡ; । ಬಾಳು ಕೆಡಲು ನೀ ತಗ್ಗಲು ಬೇಡ; । ಪರಮ ಮಂಗಲಾತ್ಮಕನನು ಬೇಗ । ಸ್ಮರಿಸಿ ಹಾಡು ಭಗವಂತನನೀಗ; । ಭಕ್ತಿಯಿಲ್ಲ ದಿಹ ಯೋಗವು ಸಾಕೆ? । ಭಕ್ತಿರಹಿತಗುಪವಾಸವದೇಕೆ? । ಹೃದಯದೊಳಗೆ ದೇವನನಿಟ್ಟವನು । ಪದುಳದಿ ಪೂಜೆಯ ಗೈದವನಹನು; । ಮಾನನನಾಟವು ದೇವನಧೀನ; । ಜ್ಞಾನಿಕಬೀರನ ಮಾತಿದು ಮಾನ ॥

ಅವನ ಮುಖ್ಯವಾದ ಉಪದೇಶವೇನೆಂದರೆ—

ಶ್ಲೋ॥ ಅಜರಾಮರತಾ ಯಸ್ಯ ಪುಂಸೋ ವೃತ್ತಿರ್ನಿರಂತರಮ್ । ಅಜ ರಾಮರತಾ ತಸ್ಯಾಪಶ್ಯಂ ಪಾಣಿತಲೇ ಸ್ಥಿತಾ —(ಸು. ಲಾ)

ಅ॥ (ಅಜ । ರಾಮ + ರತಾ) ಹುಟ್ಟುವಿಕೆಯಿಲ್ಲದಂಥ ರಾಮಚಂದ್ರನಲ್ಲಿ ಪೂರ್ಣಾಸಕ್ತಿಯನ್ನು ಯಾವಾಗಲೂ ಇಟ್ಟಿರುವವರಿಗೆ (ಅಜರಾ + ಅಮರತಾ) ಮುಪ್ಪಿಲ್ಲದಿರುವಿಕೆಯೂ ಮರಣವಿಲ್ಲದಿರುವಿಕೆಯೂ ಎರಡೂ ಅವಶ್ಯವಾಗಿ ಕೈಸೇರುವವು.

ಮುಪ್ಪು ಮರಣವೂ ಇಲ್ಲದ ಆತ್ಮಸ್ವರೂಪವೇ ತಾನೆಂದು ಅರಿತರೆ ಅವೆರಡೂ ತನ್ನ ಕೈಸೇರಿದಂತಾಗುವದು ಸ್ವಭಾವವಾಗಿದೆ. ಇದು ಸೂಕ್ಷ್ಮಬುದ್ಧಿಗೆ ಸಂಬಂಧಪಟ್ಟ ಮಾತಾಯಿತು. ಕಬೀರನು ಆ ಅರ್ಥವನ್ನು ತನ್ನ ಸ್ಥೂಲದೇಹಕ್ಕೆ ಹೊಂದಿಸಿ ತೋರಿಸಿದ್ದು ಆಶ್ಚರ್ಯಕರವಾಗಿದೆ. ಅವನ ಅಂತ್ಯಕಾಲದಲ್ಲಿ ಸ್ವಲ್ಪ ರೋಗವು ಕಾಣಬಂದಾಗ ಅವನ ಹೆಚ್ಚುಗಾರಿಕೆಯಿಂದ ತಮ್ಮ ತಮ್ಮ ಜಾತಿಯನ್ನು ಭೂಷಣಗೊಳಿಸಿಕೊಳ್ಳಬೇಕೆಂದು—

ಸಾ॥ ಹಿಂದುಧರ್ಮದಿಂದೆಮ್ಮವನೆಂದರು । ಹಿಂದುಗಳಾ ಸಮುದಾಯದೊಳು; ॥ ತಂದೆ ಮುಸಲರವನದರಿಂದೆಮ್ಮವ । ನೆಂದರು ಮುಸಲಜನಗಳು ॥

ಅವರ ಒಳತೋಟಿಯನ್ನು ನೋಡಿ ಕಬೀರನು ಹೇಳಿದ್ದು—

ಸಾ॥ ಎರಡುಗಳಿಗೆ ಬಿಟ್ಟಿನ್ನಯ ಮುಸುಕನು । ತೆರೆದು ನೋಡೆಸುತ ಹೇಳಿ ॥ ಅರಿವಿನೊಳಗೆ ಮುಳುಗಿಡನು ಕಬೀರನು । ಪರಮಸಮಾಧಿಯ ತಾಳಿ ॥

ಆಮೇಲೆ ತೆಗೆದು ನೋಡಿದಾಗ ಹಾಸಿಗೆಯ ಮೇಲೆ ಕೆಲವು ಹೂಗಳಿದ್ದವು. ಶಿಷ್ಯರು ಆಶ್ಚರ ಗೊಂಡು ಮುಸಲ್ಮಾನರು ಕೆಲವನ್ನು ತೆಗೆದುಕೊಂಡು ಹೋಗಿ ಗೋರಿಯನ್ನು ಮಾಡಿದರು; ಹಿಂದು ಗಳು ಕೆಲವನ್ನು ತೆಗೆದುಕೊಂಡು ಹೋಗಿ ಸುಟ್ಟರು.

ಕಬೀರನು ನಾಮಸ್ಮರಣೆಯಿಂದ ಇಂಥ ಮಹತ್ತ್ವವನ್ನು ಪಡೆದದ್ದನ್ನು ನೋಡಿಯೇ ಭಾಗವತ ಶಿರೋಮಣಿಗಳು ಕೀರ್ತನಾರಂಭದಲ್ಲಿ "ಸುಲಭವಾಗಿರುವ ಸಾಧನವನ್ನು ಕೇಳು" ಎಂದು ಹೇಳಿರುವರು.

# ಪುರಂದರದಾಸರು

## ಪೀಠಿಕೆ—ದಾಸವೃತ್ತಿ

ಶಂಕರಾಭರಣ—ರೂಪಕ

ದಾಸನಾಗೆಲೊ । ಮನುಜ । ದಾಸನಾಗೆಲೊ ॥ ಪ ॥ ದಾಸನಾಗಿ ಶ್ರೀಹರಿಯನ್ನು । ಲೇಸಿನಿಂದ ಭಜಿಸೆಲೊ ॥ ಅ. ಪ ॥ ತೊರೆದು ವಿಷಯಸೌಖ್ಯವನ್ನು । ಪರಿಪೂರ್ಣವಿರಕ್ತಿಯಿಂದ ॥ ಗುರುಪದಾಂಬುಜಗಳ ಹೊಂದಿ । ಹರಿಯನುಗ್ರಹವನ್ನು ಪಡೆಯೊ ॥ ೧ ॥

ಎಷ್ಟು ಪ್ರಯತ್ನಿಸಿದರೂ ಸುಖವು ಜಗತ್ತಿನಲ್ಲಿ ಸಿಕ್ಕದೆ ಇರುವ ವಿಷಯವನ್ನು ಒಬ್ಬ ಭಕ್ತನು ಆಡಿ ತೋರಿಸಿರುವವೇನೆಂದರೆ—

ವೃ॥ ಕಾಮದ ಗಾಳಿ ಬೀಸಿ, ನೆರೆ ಕೋಪದ ಮೋಡ ಮುಸುಂಕಿ, ಲಾಭಲೋ । ಭಾವಿಷ ಮಿಂಚು ಸಂಚರಿಸಿ, ಮೋಹದ ಪೇರ್ಮಳೆ ಪೊಯ್ಯು, ವಿಕಾರನಾ । ನಾಮದಧಾರೆ ಕಲ್ಕರೆದು, ಮತ್ಸರಮೋಘರವಂ ತೊಡರ್ದುದ । ಯ್ಯೋ ! ಎನಗೆ ಜೀವಹಂಸಿಗೆರವಿಲ್ಲ ಕಣಾ । ಗುರು ಶಂಕರೇಶ್ವರ ! —(ಶಂ. ಶ)

ಟಿ॥ ಆವಿಷ—ಮಾಂಸ. ಕಲ್ಕರೆದು—ಆಲಿಕಲ್ಲುಗಳು ಸುರಿದು.

ಎಷ್ಟು ಪ್ರಾಪಂಚಿಕಸಂಪತ್ತನ್ನು ಗಳಿಸಿದರೂ—

ಶ್ಲೋ॥ ಧನಂ ಚ ಭೂಮೌ, ಪಶವಶ್ಚ ಗೋಷ್ಠೇ, । ಕಾಂತಾ ಗೃಹದ್ವಾರಿ, ಜನಃ ಶ್ಮಶಾನೇ, ॥ ದೇಹಶ್ಚಿತಾಯಾಂ, ಪರಲೋಕಮಾರ್ಗೇ । ಕರ್ಮಾನುಗೋ ಗಚ್ಛತಿ ಜೀವ ಏಕಃ ॥ —(ಸು.)

ಅ॥ ನೆಲದಲ್ಲಿ ಹೂಳಿದ್ದ ಹಣವು ಅಲ್ಲಿಯೇ ಉಳಿಯುತ್ತದೆ. ದನಕರುಗಳು ಕೊಟ್ಟಿಗೆಯಲ್ಲಿಯೇ ಉಳಿಯುತ್ತವೆ. ಹೆಂಡತಿಯು ಮನೆಬಾಗಿಲಲ್ಲಿ ಉಳಿಯುತ್ತಾಳೆ. ಜನರೆಲ್ಲರೂ ಸ್ಮಶಾನದಲ್ಲಿ ಉಳಿಯುತ್ತಾರೆ ದೇಹವು ಚಿತೆಯಲ್ಲಿ ಉಳಿಯುತ್ತದೆ. ಪರಲೋಕದ ದಾರಿಯಲ್ಲಿ ಜೀವನೊಬ್ಬನೇ ತನ್ನ ಕರ್ಮಕ್ಕನುಗುಣವಾಗಿ ಹೋಗುತ್ತಾನೆ.

ಮನುಷ್ಯನು ಯಾವ ಪರಿಸ್ಥಿತಿಯಲ್ಲಿಯೂ ಯಮನ ಬಾಧೆಯನ್ನು ತಪ್ಪಿಸಿಕೊಳ್ಳಲಾಗದೆಂದು ನೀತಿಶಾಸ್ತ್ರಕಾರರು ಹೇಳಿರುವದೇನೆಂದರೆ—

ಕಂ॥ ಮುತ್ತನಿವಂ, ಕೂಸಿವನು । ದ್ವೃತ್ತನಿವಂ, ತಕ್ಕನಿವನಿವಂ ಬಲನಿವನ ॥ ತ್ಯ್ಯತ್ತಮನೆಂದಿಂತು ಮದೋ । ನ್ಮತ್ತಂ ಬಗೆದಪನೆ ಬಗೆಯನಂತಕರಾಜಂ ॥ —(ಜೀ. ಸಂ)

ಟಿ॥ ಮುತ್ತಂ—ಮುದುಕನು. ಉದ್ವೃತ್ತಂ—ಮೇರೆಯನ್ನು ಮೀರಿ ನಡೆಯುವವನು.

ಆದ್ದರಿಂದಲೇ ಭಾಗವತಶಿರೋಮಣಿಗಳು ಉಪದೇಶಿಸುವದೇನೆಂದರೆ—

ಪಂತುವರಾಳಿ—ಆದಿತಾಳ

ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ; । ಹೆಮ್ಮೆಯಿಂದ ಈ ದೇಹವ ನಂಬಬೇಡಿರೊ ॥ ಪ ॥ ಅಟ್ಟ ಅನ್ನ ಉಣ್ಣಗೊಡನು; । ಕೊಟ್ಟ ಸಾಲ ಕೇಳ ಬಿಡನು; ॥ ಪೆಟ್ಟಿಗೆಯೊಳಗಿಟ್ಟ ಚಿನ್ನವ । ತೊಟ್ಟೆನೆಂದರೆ ಬಿಡನು ಯಮನು ॥ ೧ ॥ ಅಕ್ಕನನ್ನೂ ಕರೆಯಲಿಲ್ಲ; । ಮಕ್ಕಳನ್ನೂ ಪಡೆಯಲಿಲ್ಲ; ॥ ದುಃಖಗೊಂಡು ಕಣ್ಣೀರನ್ನು । ಉಕ್ಕಿಸಿದರೆ ಬಿಡನು ಯಮನು ॥ ೨ ॥ ಹೇಳಿ ನೆಂಟರಿಷ್ಟರಿಂಗೆ । ಬೇಳೆಬೆಲ್ಲವನ್ನೆ ತಂದು ॥ ನಾಳೆ ಮಗನ ಮದುವೆಯೆನಲು । ತಾಳೆಂದರೆ ಬಿಡನು ಯಮನು ॥ ೩ ॥ ಮಾಳಿಗೆಯ ಮನೆಯು ಇರಲಿ; । ಜಾಳಿಗೆ ತುಂಬ ಹೊನ್ನು ಇರಲಿ; ॥ ಆಳುಮಂದಿ ಠಾಣೆ ಇರಲಿ; । ಕಾಲನು ತಾ ಬೆನ್ನ ಬಿಡನು ॥ ೪ ॥ ವ್ಯರ್ಥವಾದ ಈ ದೇಹವು । ನಿತ್ಯವೆಂದು ನಂಬಬೇಡಿ; ॥ ಕರ್ತ ಪುರಂದರ ವಿಠಲನ । ಭಕ್ತಿಯಿಂದ ನೆನೆಯಿರಯ್ಯ ॥ —(ದಾ)

ಧರ್ಮದಲ್ಲಿ ನಿಜವಾದ ಸುಖವಿದ್ದರೂ ಜನರು ವಿಷಯಸುಖವನ್ನೇಕೆ ಬಯಸುತ್ತಾರೆಂದರೆ—

ಶ್ಲೋ॥ ಅವಿದಿತಪರಮಾನಂದೋ । ವದತಿ ಜನೋ ವಿಷಯಮೇವ ರಮಣೀಯಮ್ ॥ ತಿಲತೈಲಮೇವ ಮೃಷ್ಟಂ । ಯೇನ ನ ದೃಷ್ಟಂ ಘೃತಂ ಕ್ವಾಪಿ ॥ —(ಸು)

ಅ॥ ಪರಮಾನಂದವನ್ನು ತಿಳಿಯದ ಜನರು ವಿಷಯಸುಖವನ್ನೇ ಮನೋಹರವೆಂದು ಹೇಳುತ್ತಾರೆ. ಯಾವನು ಎಲ್ಲಿಯೂ ತುಪ್ಪವನ್ನು ನೋಡಿಯೇ ಇಲ್ಲವೋ ಅವನಿಗೆ ಎಳ್ಳೆಣ್ಣೆಯೇ ಒಳ್ಳೆಯದೆನಿಸುವದು.

ಆದ್ದರಿಂದ ಏನು ಮಾಡಬೇಕೆಂದರೆ —

ಶ್ಲೋ|| ಅವೇಕ್ಷ್ಯ ವಿಷಯೇ ದೋಷಂ ಬುದ್ಧಿಯುಕ್ತೋ ವಿಚಕ್ಷಣಃ |
ಕಾಮಪಾಶೇನ ಯೋ ಮುಕ್ತಃ ಸ ಮುಕ್ತೇಃ ಪಥಿ ಗೋಚರಃ || —(ಸು)

ಅ|| ವಿವೇಕಿಯಾದ ಬುದ್ಧಿವಂತನು ವಿಷಯದಲ್ಲಿ ದೋಷವನ್ನು ಕಂಡು ಬಯಕೆಯೆಂಬ ಹಗ್ಗದ ಕಟ್ಟನ್ನು ಕಳಚಿಕೊಂಡರೆ ಅವನು ಮುಕ್ತಿಯ ದಾರಿಯಲ್ಲಿರುವವನಾಗುವನು.

ಮುಕ್ತಿಯ ದಾರಿಯು ಸುಲಭಸಾಧ್ಯವಲ್ಲವೆಂಬ ವಿಷಯದಲ್ಲಿ ಕವಿ ಹೇಳಿರುವದೇನೆಂದರೆ—

ಕಂ|| ಕಟ್ಟದೆ ಪಂಚೇಂದ್ರಿಯಮಂ | ಮುಟ್ಟದೆ ಪರತತ್ವದಲ್ಲಿ ಮನಸವನು ಯೋಗದ || ವಟ್ಟವನರಿಯದೆ ಸಗ್ಗದ | ಬಟ್ಟೆಯನೆಂತರಿವನಣ್ಣ ? ಕಸ್ತೂರಿರಂಗ ||
—(ಸು)

ಟಿ|| ವಟ್ಟವ–ಲಾಭವನು. ಬಟ್ಟೆಯ–ದಾರಿಯನ್ನು.

ಜಿತೇಂದ್ರಿಯನಾಗುವದೊಂದೇ ಅಲ್ಲ :—

ಶ್ಲೋ|| ಶ್ರೀಗುರೋಃ ಕರುಣಾಪಾಂಗಪೀಯೂಷವಿತರೋ ಹಿ ಸಃ | ನ ತಮಃಸಂಭವಾ ಬಾಧಾ ತಸ್ಯ ಸ್ಯಾದತಿದುಸ್ಸಹಾ || —(ಸು. ಲಾ)

ಅ|| (೧) ಯಾರ ಮೇಲೆ (ಗುರೋಃ) ಗುರುಗ್ರಹದ ಅನುಗ್ರಹಕಟಾಕ್ಷದ ಸುರಿಮಳೆಯಾಗುವದೊ ಅವನಿಗೆ ಅತ್ಯಂತ ದುಸ್ಸಹವಾದ (ತಮಃ) ರಾಹುವಿನ ಬಾಧೆಯು ಎಂದೂ ಆಗುವದಿಲ್ಲ. (೨) ಯಾರ ಮೇಲೆ (ಗುರೋಃ) ಸದ್ಗುರುವಿನ ಅನುಗ್ರಹವಾಗುವದೊ ಅವನಿಗೆ (ತಮಃ) ಅಜ್ಞಾನದ ಬಾಧೆ ಎಂದೂ ಆಗುವದಿಲ್ಲ.

ಗುರುವಿನ ಅನುಗ್ರಹವನ್ನು ಪಡೆದು ಪರಮಾತ್ಮನ ಅನುಗ್ರಹವನ್ನು ಪಡೆಯುವದಕ್ಕೆ ಮಾಡಬೇಕಾದ್ದೇನೆಂದರೆ—

ಶ್ಲೋ|| ಕೃತೇ ಯದ್ಧ್ಯಾಯತೋ ವಿಷ್ಣುಂ, ತ್ರೇತಾಯಾಂ ಜಪತೋ ಮುಖೈಃ, | ದ್ವಾಪರೇ ಪರಿಚರ್ಯಾಯಾಂ, ಕಲೌ ತದ್ಧರಿಕೀರ್ತನಾತ್ || —(ಸು)

ಅ|| ಕೃತಯುಗದಲ್ಲಿ ಧ್ಯಾನದಿಂದಲೂ ತ್ರೇತಾಯುಗದಲ್ಲಿ ಜಪದಿಂದಲೂ ಯಜ್ಞದಿಂದಲೂ ದ್ವಾಪರದಲ್ಲಿ ಪೂಜೆಯಿಂದಲೂ ಬರುವ ಫಲವು ಕಲಿಯುಗದಲ್ಲಿ ಹರಿಕೀರ್ತನದಿಂದ ಬರುವದು.

ಆದ್ದರಿಂದ ಭಾಗವತಶಿರೋಮಣಿಗಳು ಹೇಳಿರುವದೇನೆಂದರೆ—

ಕೇದಾರಗೌಳ—ಅಟತಾಳ

ಹರಿಯೆನ್ನಿರೋ | ನರ | ಹರಿಯೆನ್ನಿರೋ || ಪ || ಹೃದಯ ಹೊಲನ ಮಾಡಿ ತನುವ ನೇಗಿಲ ಮಾಡಿ | ಮನವೆಂಬ ಕುಂಟೆಯ ಹರಿವುತಲಿ || ನಾರಾಯಣಯೆಂಬ ನಾಮದ ಬೀಜವ | ನಾಲಿಗೆಯೊಳು ಕೂರಿಗೆಯಾಗಿ ಬಿತ್ತಿರೊ || ೧ || ಕಾಮ ಕ್ರೋಧವೆಂಬ ಕಸಗಳಸೀಡಾಡಿ | ಮದಮತ್ಸರಗಳ ಕೊನೆಯ ಖಂಡಿಸಿ || ಪಂಚೇಂದ್ರಿಯಗಳೆಂಬ ಮುಳ್ಳಿಗೆಯ ಹಾಕಿ | ಮನದ ಚಂಚಲವೆಂಬ ಹಕ್ಕಿಯ ಹೊಡೆವುತ || ೨ || ಉದಯಾಸ್ತಮಧ್ಯವೆಂಬ ಎರಡು ಕೊಳಗ ಮಾಡಿ | ಆಯುಷ್ಯದ ರಾಶಿ ಅಳೆಯುತಲಿ || ಸಾಸಿರನಾಮದೊಡೆಯ ನಮ್ಮ ಪುರಂದರ | ವಿಠಲನ ನಾಮವ ಮುಟ್ಟಿ ನೆನೆದೊಮ್ಮೆ || ೩ || —(ದಾ)

ಆ ನಾಮೋಚ್ಚಾರಣೆಯು ಭಕ್ತಿಪೂರ್ವಕವಾಗಿರಬೇಕೆಂಬುದನ್ನು ಮತ್ತೊಬ್ಬರು ನೆನಪುಗೊಟ್ಟುವದೇನೆಂದರೆ—

ಶ್ಲೋ|| ತೃಷ್ಣಾತೋಯೇ, ಮದನಪವನೋದ್ಧೂತಮೋಹೋರ್ಮಿಮಾಲೇ, | ದಾರಾವರ್ತೇ, ತನಯಸಹಜಗ್ರಾಹಸಂಘಾಕುಲೇ ಚ, || ಸಂಸಾರಾಖ್ಯೇ ಮಹತಿ ಜಲಧೌ ಮಜ್ಜತಾಂ ನಃ ಸ್ತ್ರಿಧಾಮನ್ | ಪಾದಾಂಭೋಜೇ ವರದ, ಭವತೋ ಭಕ್ತಿಭಾವಂ ಪ್ರದೇಹಿ || —(ಮು. ಮಾ)

ಟೀ|| ಮೂರುಲೋಕಗಳನ್ನೂ ಆವಾಸಸ್ಥಾನವಾಗಿ ಉಳ್ಳವನೆ, ಬಯಕೆಯೆಂಬ ನೀರೂ ಕಾಮವೆಂಬ ಗಾಳಿಯಿಂದ ಹುಟ್ಟಿದ ಮೋಹವೆಂಬ ಅಲೆಗಳ ಸಾಲೂ ಹೆಂಡತಿಯೆಂಬ ಸುಳಿಯೂ ಮಗನೆಂಬ ಮೊಸಳೆಗಳ ಗುಂಪೂ ಇರುವ ಸಂಸಾರವೆಂಬ ದೊಡ್ಡ ಸಮುದ್ರದಲ್ಲಿ ಮುಳುಗುತ್ತಿರುವ ನಮಗೆ ನಿನ್ನ ಪಾದಗಳಲ್ಲಿ ಭಕ್ತಿಭಾವವನ್ನು ಕೊಡು.

ಅಂಥ ಭಕ್ತಿಭಾವವನ್ನು ಹೊಂದಿ ದಾಸವೃತ್ತಿಯಲ್ಲಿರುವದೇ ಸುಲಭವಾದ ದಾರಿಯು. ಆದ್ದರಿಂದಲೇ ಕೀರ್ತನಾರಂಭದಲ್ಲಿ ಭಾಗವತೋತ್ತಮರು "ದಾಸನಾಗೆಲೊ" ಎಂದು ಮುಂತಾಗಿ ಉಪದೇಶಿಸಿರುವರು. ಇದಕ್ಕೆ ಉದಾಹರಣೆಯಾಗಿ ಈ ದಾರಿಯಲ್ಲಿ ನಡೆದು ಸದ್ಗತಿಯನ್ನು ಹೊಂದಿದಂಥ ಪುರಂದರದಾಸರ ಆಖ್ಯಾನವು ನಿರೂಪಣಮಾಡಲಾಗುವದು.

---

## ಆಖ್ಯಾನ

ಕೀ|| ಹೆಸರಾದ ಪುರಂದರಗಡದೂರೊಳ | ಗೆಸೆವ ಸ್ಮಾರ್ತ ಬ್ರಾಹ್ಮಣರೊಳ್ || ಹೆಸರುಗೊಂಡು ವರದಪ್ಪನಾಯಕರು | ವಸಿಸುತ್ತಿದ್ದರು ಸೌಖ್ಯದೊಳು ||

ಚಿನ್ನಬೆಳ್ಳಿ ವ್ಯಾಪಾರಮಾಡುತ್ತ ಬೇಕಾದಷ್ಟು ಹಣವನ್ನು ಗಳಿಸಿದ್ದ ಆ ನಾಯಕರು ಎಷ್ಟು ಮಯಸ್ಸಾದರೂ ಸಂತತಿಯಿಲ್ಲವೆಂದು ಯೋಚಿಸಿದ್ದು—

ಶ್ಲೋ|| ಧೂಲಿಧೂಸರಸರ್ವಾಂಗೋ, ವಿಕಸದ್ದಂತಕೇಸರಃ, | ಆಸ್ತೇ ಕಸ್ಯಾಪಿ ಧನ್ಯಸ್ಯ ದ್ವಾರಿ ದಂತೀ ಗೃಹೇಽರ್ಭಕಃ || —(ಸು)

ಟೀ|| ಮೈಗೆಲ್ಲ ಧೂಲಿಯನ್ನೆರಚಿಕೊಂಡಿರುವಂಥ ಮತ್ತು ಹೊಳೆಯುತ್ತಿರುವ ಹಲ್ಲುಗಳೂ ತಲೆಗೂದಲೂ ಇರುವ ಆನೆಯು ಬಾಗಿಲಲ್ಲಿಯೂ ಮಗು ಮನೆಯಲ್ಲಿಯೂ ಯಾವನೋ ಒಬ್ಬ ಧನ್ಯನಿಗೆ ಮಾತ್ರ ಇರುವದು.

ಆದ್ದರಿಂದ ಸಂತತಿಯನ್ನು ಬಯಸಿ ಅವರು ವಿಠಲನಿಗೆ ಶರಣುಹೋದದ್ದು—

ಪೂರ್ವಿಕಲ್ಯಾಣಿ—ಆದಿತಾಳ

ತಟಿತ್ಕೋಟಿನಿಭ, ಕಾಯೊ ಜಗನ್ನಾಥ, | ವಿಠಲಯ್ಯ, ವಿಠಲಯ್ಯ || ಪ ||
ಭಜಿಸುವೆ ನಿನ್ನನು ಅಜಭವಸುರನುತ, | ಭಜಕಾಮರತರು, ಕುಜನಕುಠಾರಾ

॥ ೧ ॥ ನೀ ಕರುಣಿಸದೆ ನಿರಾಕರಿಸಲು ಎನ್ನ । ಸಾಕುವರ್ಯಾರು ? ದಯಾಪರಮಾರುತಿ ॥ ೨ ॥ ಶರಣಾಗತರನು ಪೊರೆವನೆಂಬ ತವ । ಬಿರುದ ಕಾಯೊ ಕರಿವರದ, ಜಗನ್ನಾಥ ॥ ೩ ॥ —(ದಾ)

ಅದರ ಫಲವಾಗಿ—

ಸಾ॥ ಪುರುಷರತ್ನ ಕೃಷ್ಣಪ್ಪನಾಯಕರು । ಧರಣಿಗೆ ಸುಮುಹೂರ್ತದೊಳು ॥ ಬರುತಲಿ ಜನರನುಲ್ಲಾಸಗೊಳಿಸಿದರು । ಪರಮಾನಂದರಸದೊಳು ॥

ಅವರು ದೊಡ್ಡವರಾಗಿ ತಂದೆಯ ಉದ್ಯೋಗವನ್ನೇ ಮುಂದುವರಿಸುತ್ತ ಲಕ್ಷ್ಮೀಬಾಯಿಯೆಂಬ ಕನ್ಯೆಯನ್ನು ಮದುವೆಯಾಗಿ ಗೃಹಸ್ಥರಾಗಿದ್ದರು. ಗೃಹಸ್ಥರಲ್ಲಿರಬೇಕಾದ ಒಂದು ಮುಖ್ಯವಾದ ನಡೆವಳಿಕೆಯ ವಿಷಯವಾಗಿ ಕವಿ ಹೇಳಿರುವದೇನೆಂದರೆ—

ಶ್ಲೋ॥ ಯೋ ನಿತ್ಯಂ ಮಾರ್ಗಣಾಂ ಬಿಭೃತ್ಸ ವೈದೇಹೀ ಪರೋ ಮತಃ; ।
ಯೋ ನಿತ್ಯಂ ಮಾರ್ಗಣಾಂ ಬಿಭೃತ್ಸ ವೈದೇಹೀಪರೋ ಮತಃ ॥ —(ಸು. ಲಾ)

ಅ॥ ಯಾವನು ಯಾವಾಗಲೂ (ಮಾರ್ಗಣಂ) ಯಾಚಕರಿಗೆ ಆಶ್ರಯವನ್ನು ಕೊಡುತ್ತಾನೊ ಆವನು (ವೈ+ದೇಹೀ+ವರಃ) ಮನುಷ್ಯರಲ್ಲಿ ಶ್ರೇಷ್ಠನೆನಿಸುವನು. ಯಾವನು ಯಾವಾಗಲೂ (ಮಾರ್ಗಣಂ) ಬಾಣಧಾರಣೆಯನ್ನು ಮಾಡುತ್ತಾನೊ (ವೈದೇಹೀವರಃ) ಅವನು ಸೀತಾಪತಿಯೆನಿಸುವನು.

ಆದರೆ ಕೃಷ್ಣಪ್ಪನಾಯಕರು ತದ್ವಿರುದ್ಧವಾಗಿ ಪರಮಲೋಭಿಗಳಾಗಿದ್ದರು. ಆ ಲೋಭದ ನೀಚತ್ವವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಶ್ಲೋ॥ ಕಾಮಃ ಕ್ರೋಧಶ್ಚ ಲೋಭಸ್ತ್ರಯಮಪಿ ಪರಮಂ ಕಷ್ಟಮಾಹುಸ್ತಥಾಪಿ । ದ್ವಾವಾದ್ಯೌ ತತ್ರ ಸೌಮ್ಯೌ ಕಥಮಪಿ ಹಿ ಪರಂ ತ್ವಂತಜೋಽತ್ಯಂತಚಂಡಃ; ॥ ಯತ್ಸ್ಯಾಸ್ವೃತಾಂ ಪಂಗುಲೌ ದ್ವೌ ರತಿರಸವಿರತಾವರ್ದಿನೋಽನ್ಯೋ ವಿರೋಧಿ । ಧ್ವಂಸೇ ತ್ವೇತಸ್ಯ ಲಾಭಾದುಪರಿಪದಚತುಷ್ಕಪ್ರತಿಷ್ಠಾ ಹಿ ದೃಷ್ಟಾ ॥ —(ಸು. ಲಾ)

ಅ॥ ಬಯಕೆಯೂ ಸಿಟ್ಟೂ ಜಿಪುಣತನವೂ ಮೂರೂ ಬಹು ನೀಚವಾದುವುಗಳೆನ್ನುವರು. ಆದರೂ ಮೊದಲನೆಯ ಎರಡೂ ಹೇಗಾದರೂ ತಗ್ಗುವವು. ಮೂರನೆಯದು ಬಹಳ ಕ್ರೂರವಾದದ್ದು. ಏಕೆಂದರೆ ಸ್ತ್ರೀಯು ಅನುಭವಕ್ಕೆ ಬಂದ ಮೇಲೆ ಕಾಮವು ತಗ್ಗುವದು. ನಮಗಾಗುವ ಲಾಭಕ್ಕೆ ಬಂದಿರುವ ಅಡ್ಡಿ ಹೋದರೆ ಸಿಟ್ಟು ತಗ್ಗುವದು. ಹೀಗೆ ಇವೆರಡೂ ಲಾಭವಾದಮೇಲೆ ತಗ್ಗುವವು. ಇನ್ನು ಲೋಭವೆಂಬುದನ್ನು ತೆಗೆದುಕೊಂಡರೆ ಇದು ಲಾಭವಾದ ಮೇಲೆ ಅದರ ನಾಲ್ಕರಷ್ಟು ಮೇಲಿರುವದು. (ಲಾ, ಲೀ, ಲೂ, ಲೇ—ಹೀಗೆ ನಾಲ್ಕು ದೀರ್ಘಗಳಾದ ಮೇಲೆ ಲೋ ಬರುವದು.)

ಕೃಷ್ಣಪ್ಪನಾಯಕರು ಹೀಗೆ ಲೋಭಿಗಳಾಗಿರುವಾಗ—

ದಾ॥ ಬಂದಿತ್ತೈ ಅರ್ಧೋದಯದ ಯೋಗವಾಗ; । ಒಂದುನೂರಬ್ದಂಗಳಿಗೆ ಬರ್ಪ ಯೋಗ; ॥ ಬಂದಿತಾ ಭೀಮಾಸ್ನಾನಕಾಸ್ತಿಕಾಳಿ; । ಹಿಂದೆ ಬಂದರ್ ನಾಯಕರದನ್ನು ಕೇಳಿ ॥

ಆಗ ಏನಾಯಿತೆಂದರೆ—

ಸಾಂ|| ಮರೆಯೊಳಗೆಲ್ಲಿಯೊ ಎಸಾಯುಲು ನಾಯಕ | ರಿರಲೊಬ್ಬ ಬ್ರಾಹ್ಮಣ ಬಂದು || ಭರದಿಂದ ದಾನವ ಕೇಳಿದನಾ ಹೊತ್ತು | ಪರಮಪುಣ್ಯಪ್ರದವೆಂದು ||

ಆ ಬ್ರಾಹ್ಮಣನು ಆಗ ಹಾಡಿದ್ದು—

ಸೌರಾಷ್ಟ್ರ—ರೂಪಕ

ಮಾಡು ದಾನಧರ್ಮ ಪರಉಪಕಾರವ; ಮರೆಯದಿರೆಚ್ಚರಿಕೆ | ಕೇಡ ನೆನೆಯಬೇಡ ನಂಬಿದವರ ಮೇಲೆ; ಕೆಡುವೆ ನೀನೆಚ್ಚರಿಕೆ || ಪ || ಬಾಳಿ ಬದುಕಿ ನೀರಿರುವಾಗಲೆ ಬಂಧುಬಳಗಗಳೆಚ್ಚರಿಕೆ | ಹಾಳು ಸಂಸಾರಕ್ಕೆ ಹಲವರ ಹತಗೈದು ಒದುಕನಿರೆಚ್ಚರಿಕೆ || ೧ || ಚೆನ್ನಾಗಿ ಬದುಕಿದೆ, ನಾನು ಗಳಿಸಿದೆಂಬೊ ಚೇಷ್ಟೆಬೇಡೆಚ್ಚರಿಕೆ | ಮುನ್ನ ಮಾಡಿದ ಪುಣ್ಯಫಲದಿಂದ ಬಂದದ್ದು ಮುಂದೆ ನೋಡೆಚ್ಚರಿಕೆ || ೨ || ಹೆಣ್ಣು ಹೊನ್ನು ಮಣ್ಣು ನಿನ್ನ ಣಕಿಸಿಹೋದುದಿನ್ನು ನೋಡೆಚ್ಚರಿಕೆ | ಇನ್ನು ನಂಬಬೇಡ; ನಿನಗೆ ಮೃತ್ಯುವು ಕಂಡ್ಯ! ತಿಳಿದಿರು ಎಚ್ಚರಿಕೆ || ೩ || ಬಲ್ಲಿದ ನೀನೆಂದು ಬಡವರ ಬಾಯ್ಮೇಲೆ ಒಡಿಯದಿರೆಚ್ಚರಿಕೆ | ಎಳ್ಳಷ್ಟು ತಪ್ಪದೆ ಯಮನಾಳುಗಳು ನರಕಕ್ಕೆಳೆಯುವರೆಚ್ಚರಿಕೆ || ೪ || ಕಾಲನ ದೂತರು ಯಾವಾಗ ಎಳೆವರೊ ಕಾಣದು ಎಚ್ಚರಿಕೆ | ಬೇಲೂರ ಪುರವಾಸ ನೆಲೆಯಾದಿಕೇಶವನ ಮರೆಯದಿರೆಚ್ಚರಿಕೆ || ೫ || —(ದಾ)

ಆಗ ಏನಾಯಿತೆಂದರೆ—

ಕಂ|| ಸಲ್ಲದಿಹ ಕಾಸನ್ನು | ಕೊಳ್ಳೆಂದು ಕೊಡಹೋಗ | ಲೊಲ್ಲೆನಿದು ನಿನ್ನೊಳೇ ಇರಲೆನ್ನುತ || ನಿಲ್ಲದೇ ಬ್ರಾಹ್ಮಣನ | ದೆಲ್ಲಿಗೋ ಹೋಗೆ ನೀ | ರಲ್ಲಿ ನಾಯಕರು ಮಿಂದರು ಜವದೊಳು ||

ಇದಾದ ಕೆಲವು ದಿವಸದ ಮೇಲೆ ನಾಯಕರಿಗೆ ಬುದ್ಧಿಗಲಿಸಬೇಕೆಂದು ದೇವರು ಇನ್ನೊಬ್ಬ ಬ್ರಾಹ್ಮಣನಾಗಿ ಬಂದು ಹೂಡಿದ ತಂತ್ರವೇನೆಂದರೆ—

ಕಂ|| ಮಗನುಪನಯನಕೆ ಮಿಗಿಲು ಹಣವ ಹಿಂ | ದೆಗೆಯದೆ ಕೊಡಿರೆನ ಲಿನ್ನೊಬ್ಬ || ಬಗೆಯದದನು ಬಲು | ಹೊಗರಿನಿಂದ ದಾ | ರಿಗನ ಕಳುಹಿ ಬಗೆದರು ಹಬ್ಬ ||

ನಾಯಕರು ಆ ಕುತ್ತದಿಂದ ಪಾರಾದೆನೆಂದಿರುವಾಗ—

ಕಂ|| ಭೂಸುರನು ನಾಯಕರ | ವಾಸಸ್ಥಳಕ್ಕೈದಿ | ಲೇಸಾಗಿ ಹೇಳಿಕೊಂಡವರ ಸತಿಗೆ || ಕಾಸು ಬೇರಿಲ್ಲದಿರೆ | ಭಾಸಿಸುವ ಮೂಗುತಿಯ | ನಾ ಸಹುಸಿ ಪಡೆದು ಮತ್ತೈತಂದನು ||

ಎರಡನೆ ಸಲ ಬಂದಾಗ ಆ ಬ್ರಾಹ್ಮಣನು ಹೇಳಿದ್ದು—

ಭೋ|| ಸುದತಿಯೊಬ್ಬಳಿದನು ನನಗೆ | ಮುದದಿ ಭಿಕ್ಷೆಗಿತ್ತಿರುವಳು; | ಸದಯರಾಗಿ ನೀವಿದನ್ನು ಕೊಂಡುಕೊಳ್ಳಿರಿ; || ಇದರ ಬೆಲೆಯ ನನಗೆ ಕೊಡಿರಿ; | ಹದುಳವಹುದು ನಿಮಗೆ ನೋಡಿ | ಇದಕೆ ನೀವು ತಲೆಯ ಕೊಡಹಬೇಡಿರೆಂದನು ||

ಟಿ|| ಹದುಳ-ಕ್ಷೇಮ. ತಲೆಯ ಕೊಡಹಬೇಡಿರಿ-ಇಲ್ಲವೆಂದು ಹೇಳಬೇಡಿರಿ.

ಅದನ್ನು ನೋಡಿ ನಾಯಕರು ತಮ್ಮ ಹೆಂಡತಿಯದೆಂದು ಗ್ರಹಿಸಿ ಆ ಗುಟ್ಟನ್ನು ಹೊರಗೆ ಬಿಡದೆ ತಮ್ಮ ಪೆಟ್ಟಿಗೆಯೊಳಕ್ಕದನ್ನು ಸೇರಿಸಿ ಹಣಕ್ಕೆ ಆಮೇಲೆ ಬರಹೇಳಿ ತಮ್ಮ ಹೆಂಡತಿಯನ್ನು ದಂಡಿಸುವದಕ್ಕಾಗಿ ಒಳ್ಳೆ ಸಿಟ್ಟಿನಿಂದ ಬಂದಿದ್ದಾರೆ—

ಶ್ಲೋ|| ಲೋಭಾತ್ಕ್ರೋಧಃ ಪ್ರಭವತಿ; ಕ್ರೋಧಾದ್ದ್ರೋಹಃ ಪ್ರವರ್ತತೇ; | ದ್ರೋಹೇಣ ನರಕಂ ಯಾತಿ ಶಾಸ್ತ್ರಜ್ಞೋಽಪಿ ವಿಚಕ್ಷಣಃ ||—(ಸು)

ಅ|| ಶಾಸ್ತ್ರವನ್ನು ತಿಳಿದವನಾದರೂ ವಿವೇಕಿಯು ಜಿಪುಣತನದಿಂದ ಸಿಟ್ಟಿಗೇಳುವನು. ಸಿಟ್ಟಿನಿಂದ ದ್ರೋಹಕ್ಕೆ ತೊಡಗುವನು. ದ್ರೋಹದಿಂದ ನರಕಕ್ಕೆ ಹೋಗುವನು

ಕೃಷ್ಣಪ್ಪನಾಯಕರು ಇಂಥ ಸಿಟ್ಟಿಗೆ ಅವಕಾಶವನ್ನು ಕೊಟ್ಟು ಸಿಂಹಗರ್ಜನೆಯಿಂದ ಹೆಂಡತಿಯನ್ನು ಕೂಗಿ ಮೂಗುತಿಯನ್ನು ತರಹೇಳಲು ಅದಕ್ಕೆ ಏನುತ್ತರವನ್ನು ಕೊಡುವದಕ್ಕೂ ತೋಚದೆ ಹೋದದ್ದರಿಂದ ಆಕೆಯು ತನ್ನ ಗಂಡನ ಮನಸ್ಸಿಗೆ ಬೇಸರವನ್ನುಂಟುಮಾಡುವದಕ್ಕಿಂತ ಸಾಯುವದು ಮೇಲೆಂದು ಒಂದು ಬಟ್ಟಲಲ್ಲಿ ವಿಷವನ್ನಣಿಮಾಡಿಕೊಂಡು ಲಕ್ಷ್ಮಿಯನ್ನು ಕುರಿತು ಕೊನೆಯ ಪ್ರಾರ್ಥನೆಯನ್ನು ಮಾಡಿದ್ದು—

ಕಮಾಚು—ರೂಪಕ

ಕರುಣಿಸೆನ್ನ ಹರಿಯ ರಮಣಿ, | ವರದೆ, ಲಕ್ಷ್ಮಿದೇವಿಯೇ || ಪ || ಕಮಲನೇತ್ರೆ, ವಿಮಲಗಾತ್ರೆ, | ಕಮಲಪೀಠಪೂಜಿತೇ, || ಕಮಲಬಾಣಜನನಿ, ರಮ್ಯ | ಕಮಲಪಾಣಿರಾಜಿತೇ || ೧ || ಸಕಲನಿಗಮವಿನುತಚರಣೆ, | ಸಕಲಭಾಗ್ಯದಾಯಿನಿ, || ಸಕಲಮೌನಿನಿಕರವಂದ್ಯೆ, | ಸಕಲಲೋಕನಾಯಕಿ || ೨ || ಶರಧಿತನುಜೆ, ಮಂಗಳಾಂಗಿ, | ಪರಮಸೌಖ್ಯದಾಯಿನಿ, || ವರದೆ ವೆಂಕಟಾದ್ರಿವನಸ | ಪುರನಿವಾಸೆ, ಮೋಹಿನೀ || —(ದಾ)

ಇನ್ನು ಆ ವಿಷವನ್ನು ಕುಡಿಯಬೇಕೆಂದೆತ್ತಿ ನೋಡಲಾಗ ತನ್ನ ಮೂಗುತಿಯು ಅದರಲ್ಲಿ ಕಾಣಬಂತು. ಆಶ್ಚರ್ಯದಿಂದ ಲಕ್ಷ್ಮೀಬಾಯಿಯು ಅದನ್ನೆತ್ತಿಕೊಳ್ಳುವ ಹೊತ್ತಿಗೆ ನಾಯಕರು ಅತ್ಯಂತಕ್ರುದ್ಧರಾಗಿ ಒಳಹೊಕ್ಕು ತಮ್ಮ ಹೆಂಡತಿಯ ಕೈಯಲ್ಲಿ ಮೂಗುತಿಯನ್ನು ಕಂಡು ಬೆರಗಾಗಿ ಅದನ್ನು ತಮ್ಮ ಕೈಗೆ ತೆಗೆದುಕೊಂಡು ಹೋಗಿ ಮತ್ತೆ ಅಂಗಡಿಯಲ್ಲಿ ತಮ್ಮ ಪೆಟ್ಟಿಗೆಯ ಬಾಯನ್ನು ತೆಗೆದು ನೋಡಿದಾಗ ತಾವು ಬ್ರಾಹ್ಮಣನಿಂದ ತೆಗೆದುಕೊಂಡಿಟ್ಟಿದ್ದ ಮೂಗುತಿಯಿಲ್ಲದ್ದನ್ನು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡು ಹೇಳಿದ್ದು —

ಕಂ|| ಮನಕಿದು ಸೋಜಿಗವೆನಿಪುದು | ಘನಮಾಯಾಬಲವೊ? ಮಂತ್ರಸಿದ್ಧಿಯೊ? ಅವನಾ || ಅನುಪಮತಪಃಪ್ರಭಾವವೊ? | ಅನುಮಾನವದೆನ್ನನಿಂತು ಬಾಧಿಪುದೀಗಳ್ || — (ಪು. ಚ)

ಟಿ|| ಅನುಮಾನ-ಸಂಶಯ.

ಆಮೇಲೆ ಅವರು ಮನೆಗೆ ಬಂದು ನಡೆದ ಸಂಗತಿಯನ್ನೆಲ್ಲ ತಿಳಿದು ಆ ಬ್ರಾಹ್ಮಣನು ಪರಮಾತ್ಮನೇ ಆಗಿರಬೇಕೆಂದೂ ತನಗೆ ಒಳ್ಳೆ ದಾರಿಯನ್ನು ತೋರಿಸಬೇಕೆಂದೇ ಹೀಗೆ ಮಾಡಿರುವನೆಂದೂ ಇನ್ನು ತಾನು ಹಿಂದಿನಂತೆ ಇರಬಾರದೆಂದೂ ಎಚ್ಚರಗೊಂಡು—

ಕೀ॥ ಕರೆದು ನಾಯಕರು ದೀನಜನಂಗಳಿ | ಗಿರದೆ ತಮ್ಮ ಸರ್ವಸ್ವವನು ॥
ನೆರೆ ಧಾರೆಯನೆರೆದರು; ಕೈಗೊಂಡರು | ಭರದಿ ಮುಂದೆ ಹರಿನಾಮವನು ॥

ನಾಯಕರ ಈ ದಾನಕ್ಕೆ ಅನ್ವಯಿಸುವಂತೆ ಕವಿ ಚಮತ್ಕಾರವಾಗಿ ಹೇಳಿರುವದೇನೆಂದರೆ—

ಶ್ಲೋ॥ ಅಹೋ! ಧನಾರ್ಥಂ ಪ್ರಧನಂ ವಿಧಾಯ | ಸುಖೇನ ವೀರಾ ನಿಧನಂ ಭಜಂತೇ; ॥ ತತ್ತ್ಯಾದೃಗಪ್ಯತ್ರ ಧನಂ ವಿಹಾಯ | ಧೀರಾಃ ಸುಖಂ ಶ್ರೀಪತಿಮಾಶ್ರಯಂತೇ ॥ —(ಸು. ಲಾ)

ಅ॥ ಹಣಕ್ಕಾಗಿ ದೊಡ್ಡದೊಡ್ಡ ವೀರರು ಕೂಡ (ಪ್ರಧನಂ) ಯುದ್ಧವನ್ನು ಮಾಡಿ (ನಿಧನಂ) ಸಾವನ್ನು ಪಡೆಯುತ್ತಾರೆ ಅಂಥ ಹಣವನ್ನೂ ಬಿಟ್ಟು ಧೀರರು ಸುಖವಾಗಿ ಶ್ರೀಪತಿಯನ್ನಾಶ್ರಯಿಸುತ್ತಾರೆ.

ಹೀಗೆ ನಿಶ್ಚಯವನ್ನು ಮಾಡಿ ಆ ತಮ್ಮ ಸ್ಥಿತಿಯ ವಿಷಯದಲ್ಲಿ ತಾವೇ ಸಂತೋಷಗೊಂಡದ್ದು—

ಪಂತುವರಾಳಿ—ಆದಿತಾಳ.

ಆದದ್ದೆಲ್ಲ ಒಳಿತೇ ಆಯಿತು ॥ ಪ ॥ ನಮ್ಮ | ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು ॥ ಅ. ಪ ॥ ದಂಡಿಗೆ ಬೆತ್ತ ಹಿಡಿಯುವದಕ್ಕೆ | ಮಂಡೆಮಾಚಿ ನಾಚುತಿದ್ದೆ ॥ ಹೆಂಡತಿ ಸಂತತಿ ಸಾವಿರವಾಗಲು | ದಂಡಿಗೆ ಬೆತ್ತ ಹಿಡಿಸಿದಳಯ್ಯ ॥ ೧ ॥ ಗೋಪಾಳಬುಟ್ಟಿ ಹಿಡಿಯುವದಕ್ಕೆ | ಭೂಪತಿಯಂತೆ ಗರ್ವಿಸುತಿದ್ದೆ ॥ ಆ ಪತ್ನೀಕುಲ ಸಾವಿರವಾಗಲು | ಗೋಪಾಳಬುಟ್ಟಿ ಹಿಡಿಸಿದಳಯ್ಯ ॥ ೨ ॥ ತುಳಸಿಯ ಮಾಲೆಯ ಹಾಕುವದಕ್ಕೆ | ಅರಸನಾಗಿ ನಾಚುತಿದ್ದೆ ॥ ಸರಸಿಜಾಕ್ಷ ಪುರಂದರವಿಠಲನ | ದಾಸಗೆ ಮಾಲೆ ಹಾಕಿಸಿದಳು ॥ —(ದಾ)

ಎಂದು ಪತ್ನೀಸಮೇತರಾಗಿ ಹೊರಟ ನಾಯಕರು—

ಸಾ॥ ಪಂಢರಾಪುರದಿ ಭಿಕ್ಷಾಟನೆಯಿಂ | ದುಂಡು ಹನ್ನೆರಡುವರ್ಷ ॥
ಪಂಢರಿನಾಥನ ಸೇವಿಸಿದರು ಮುಂ | ಕೊಂಡು ತನುಗೆ ಬರೆ ಹರ್ಷ ॥

ಅಲ್ಲಿಗೆ ಮುಸಲ್ಮಾನರ ಹಾವಳಿ ಹರಡುತ್ತಲೆ—

ದಿಂ॥ ಕನಸಿನೊಳ್ವಿಠಲದೇವನಾಗ ತೋರಿ | ದಣಿಯುತಲ್ಲಿಂದು ಹಂಪೆಯನ್ನು ಸೇರಿ ॥ ಅನಘರಾಗಿದ್ದ ವ್ಯಾಸರಾಯರಲ್ಲಿ | ವಿನಯದಿಂ ತೋರ್ದರ್ ಶಿಷ್ಯವೃತ್ತಿಯಲ್ಲಿ ॥

ಅಲ್ಲಿ ಅವರ ವೃತ್ತಿ ಬದಲಾದದ್ದೆಂತೆಂದರೆ—

ಭಾ॥ ಪಡೆದು ವೈಷ್ಣವದೀಕ್ಷೆಯನು ಮೇ | ಣುಡುತೆ ಕಾವಿಯ ಶೇಷವಸ್ತ್ರವ | ಬಿಡದೆ ದ್ವಾದಶಮುದ್ರೆ ತುಳಸಿಯ ಸರಗಳಿಟ್ಟೆಸೆ ॥ ಹಿಡಿದು ತಾಳವ ಕಾಲಗೆಜ್ಜೆಯು | ಘುಡುಘುಡಿಸಲರೆದೆರೆದ ಕಂಗಳ | ಲೊಡನೆ ಕುಣಿಯುತ ಹರಿಯ ಭಜಿಸುತಲಿದ್ದರನವರತ ॥

ಈ ರೀತಿಯಲ್ಲಿ ಪುರಂದರದಾಸರೆಂದು ಹೆಸರುಗೊಂಡು ಅವರು—

ಭೋ|| ದೇಶದೇಶವನ್ನು ತಿರುಗಿ | ಲೇಸೆನಿಸಲ್ಕೆ ಮಧ್ವಮತದ | ವಾಸಿಯನ್ನು ಬೆಳೆಸಿದರನೇಕ ಹಾಡಿನಿಂ || ಭಾಸುರವಹ ಸುಳಾದಿಯು ಸಂ | ದೇಶದುಗಾಭಾಗದಿಂದ | ರಾಶಿಯಾಗುತ್ತೈದು ಲಕ್ಷವಾಗೆ ಪದಗಳು ||

ಟಿ|| ಸುಳಾದಿ-ಸುಲಭವಾದ ಹಾದಿ ತೋರಿಸುವದು. ಪ್ರಾಸಲಯಬದ್ಧವಾಗಿ ಐದು ಅಥವಾ ಏಳು ತಾಳಗಳಲ್ಲಿ ನಿರ್ದೇಶಿಸಲ್ಪಟ್ಟ ಒಂದು ಪ್ರಮೇಯವನ್ನು ಪೂರ್ತಿಗೊಳಿಸುವ ಗೀತೆ—(ಕೀ. ತ). ಉಗಾಭಾಗ—(ಉ) ಊರ್ಧ್ವಲೋಕಕ್ಕೆ (ಗ) ಹೋಗತಕ್ಕಂಥ (ಭಾಗ) ಯಾವದೋ ಅದು ಉಗಾಭಾಗ. (ಉಗಾಭೋಗ) ಇದು ಸುಳಾದಿಯ ಖಿಲಭಾಗ.— (ಕೀ. ತ). ವಾಸಿ—ಯಶಸ್ಸು. ಸಂದೇಶ—ಉಪದೇಶ.

ಹೀಗಿರುತ್ತ ಒಂದು ದಿನ ಅವರು ಪಂಢರಾಪುರಕ್ಕೆ ಹೋಗಿದ್ದಾಗ ರಾತ್ರಿ ಏನಾಯಿತೆಂದರೆ

ಕಂ|| ನಡುರಾತ್ರಿ ಕಾಲದೊಳೆಯು | ಲೊಡನೆ ನೀರನು ಬೇಡೆ | ಕಡುನಿದ್ರೆಯೊಳಗಿದ್ದನವರಶಿಷ್ಯ; | ಒಡನೆ ಮುತ್ತ್ಯಾಬ್ಬಯೊಂ | ಗಡನೆ ತಂದಿಹ ನೋಡೆ | ತಡಗೈದೆಯೇಕೆಂದು ಮೊಡೆಪರವನ ||

ಆಮೇಲೆ ದಾಸರ ಕೆಲಸವೇನೋ ಸಾಗಿತು. ಆದರೆ ಪ್ರೀತಿಯಿಂದ ದಾಸರ ಸೇವೆಯನ್ನು ಮಾಡಿದ್ದಕ್ಕೆ ಆ ಹೊಡೆಸಿಕೊಂಡ ವಿಠಲನು ದಾಸರಿಗೆ ಬುದ್ಧಿಯನ್ನು ಕಲಿಸಬೇಕೆಂದು ಮಾಡಿದ್ದೇನೆಂದರೆ—

ಶ|| ಗುಡಿಯೊಳು ರುಕ್ಮಿಣಿ | ಯೊಡವೆಗಳೊಳು ತಾ | ಬಿಡದೆ ಕದ್ದು ಕಂಕಣವನ್ನು || ನಡೆದು ವೇಶ್ಯೆಗದನೊಡನಿತ್ತನು ತಾ | ಪಡೆದು ದಾಸರಾಕೃತಿಯನ್ನು ||

ಮರುದಿನ ರಾಜಭಟರು ಆ ಕಳವನ್ನು ಕಂಡುಹಿಡಿದು ದಾಸರನ್ನು ಕರೆದುಕೊಂಡು ಬಂದು ರಾಜಾಜ್ಞೆಯಂತೆ ಒಂದು ಕಂಬಕ್ಕೆ ಕಟ್ಟಿ ಹೊಡೆಯಲಾರಂಭಿಸಿದಾಗ ದಾಸರು ದೇವರನ್ನು ಕೇಳಿಕೊಂಡದ್ದು—

ಕ|| ಕುಶಲವತಾತಾ ತಾ ತಾ | ಕುಶಲವನೆನಗೊಲ್ಲು ಕಾಮಿತಾವಳಿಕಲನಾ || ಕುಶಲ, ವರದೃಪ್ತದೈತ್ಯಾಂ | ಕುಶ, ಲವಮಾತ್ರಂ ನಿನತ್ತು ದಯೆಯಿರೆ ಸಾಲ್ಗುಂ || —(ಸೂ. ತಾ)

ಟಿ|| ತಾತಾ—ತಂದೆಯೆ, ಕಾಮಿತಾ . . . . ಕುಶಲ—ಇಷ್ಟಾರ್ಥಗಳನ್ನು ಕೊಡುವದರಲ್ಲಿ ಚತುರನಾದವನೆ. ವರ . . . . ಕುಶ—ವರದಿಂದ ಮದಿಸಿದ ರಾಕ್ಷಸರನ್ನು ನಿಗ್ರಹಿಸುವವನು.

ಆಗ ಪೆಟ್ಟಿನ ಮೇಲೆ ಪೆಟ್ಟು ಬೀಳುತ್ತಲೆ ತಾವು ಹಿಂದಿನ ರಾತ್ರಿ ನೀರಿಟ್ಟವನನ್ನು ನಿಷ್ಕಾರಣವಾಗಿ ಹೊಡೆದದ್ದರ ಫಲವೆಂದು ಮನಸ್ಸಿಗೆ ತೋರಲಾಗ ಅವರು ಅದನ್ನು ವ್ಯಕ್ತಗೊಳಿಸಿದ್ದು—

ಪೂರ್ವಿ ಆಟತಾಳ.

ಮುಯ್ಯಕ್ಕೆ ಮುಯ್ಯ ತೀರಿತು; | ಜಗ | ದಯ್ಯ ವಿಜಯ್ಯ ಸಾಹಯ್ಯ ಪಂಢರಿರಾಯ || ಪ || ಸಣ್ಣವನೆಂದು ನಾ ನೀರು ತಾರೆಂದರೆ | ಬೆಣ್ಣೆಕಳ್ಳ ಕೃಷ್ಣ ಮರವೆಮಾಡಿ || ಚಿನ್ನದ ಗಿಂಡಿಲಿ ನೀರು ತಂದಿಟ್ಟರೆ | ಕಣ್ಣು ಕಾಣದೆ

ನಾ ತೊಣಗೆ ಪಂಢರಿರಾಯ ॥ ೧ ॥ ಎನ್ನ ಹೆಸರು ಮಾಡಿ ಸೂಳೆಗೆ ಕಂಕಣ | ವನ್ನು ನೀನಿತ್ತೆ ನಿಜರೂಪದಿ; ॥ ಎನ್ನ ಪರಿಯೊಳಗೆ ಭಂಡನ ಮಾಡಿ ಈ | ಮಾನವರೊಳಗೆಲ್ಲ ಮಾನವ ಕೊಂಡಿ ॥ ೨ ॥ ಭಕ್ತವತ್ಸಲನೆಂಬ ಬಿರುದು ಬೇಕಾದರೆ | ಭಕ್ತರಧೀನ ನೀನಿರಬೇಡವೆ? ॥ ಯುಕ್ತಿಲಿ ನಿನ್ನಂಥ ದೇವರ ನಾ ಕಾಣೆ; | ಮುಕ್ತೀಶ ಪುರಂದರ ವಿಠಲ ಪಂಢರಿರಾಯ ॥ ೩ ॥ —(ದಾ)

ದಾಸರು ಹೀಗೆ ಹಾಡುತ್ತಿರುವಾಗ ಹಗ್ಗಗಳು ತಮ್ಮಷ್ಟಕ್ಕೆ ತಾವೆ ಹರಿದುಕೊಂಡವು. ಕಂಕಣವು ರುಕ್ಮಿಣೀ ದೇವಿಯ ಮೇಲೆ ಕಾಣಿಸಿಕೊಂಡಿತು. ಈ ಆಶ್ಚರ್ಯವನ್ನು ನೋಡಿ ದೂತರು ರಾಜನಿಗೆ ತಿಳಿಸಿದ ಮೇಲೆ ರಾಜನು ಬಂದು ನೋಡಿ ತಿಳಿಯದೆ ಮಾಡಿದ ಅಪರಾಧವನ್ನು ಕ್ಷಮಿಸಬೇಕೆನ್ನಲು ದಾಸರು ತಮ್ಮ ಸಾಧುಸ್ವಭಾವವನ್ನು ತೋರಿಸಿ ಅವನಿಗೆ ಪ್ರಸನ್ನತೆಯನ್ನೇ ತೋರಿಸಿದರು.

ತ್ರಿ॥ ಜಂಗನನ ಕರಗಿಸಲು ಬೆಂದು ಪರಿಮಳವಕ್ಕು; | ಸಂದರಿವನರಿದು ಸತ್ಪುರುಷರೆನಿಸಿಪರು | ನೊಂದು ಸೈರಿಪರು ಸರ್ವಜ್ಞ ॥ —(ಸ. ವ)

ಇವರ ವೈರಾಗ್ಯದ ಪರಮಾವಧಿಗೆ ಒಂದೆರಡು ಉದಾಹರಣೆಗಳೇನೆಂದರೆ—

— ಉಗಾಭೋಗ —

(೧) ನಿನ್ನ ಭಕ್ತರೆಂದೆನಿಸಿದ ಜನರು ಭಂಗಪಡಲೀಬೇಕು | ದಿನ ಪ್ರತಿದಿನ ಅನ್ನ ಉದಕ ವಸ್ತ್ರಂಗಳು ಕಾಣದೆ ಇರಲೀಬೇಕು | ಜನ್ಮತ್ರಿ ರೋಗಂಗಳು ಹತ್ತಿ ಇರಲೀಬೇಕು | ತನ್ನವರ ಕೈಯಿಂದ ಛೀ ಅನಿಸಿಕೊಳಲೀಬೇಕು | ಪನ್ನಂಗಶಯನ ಶ್ರೀ ಪುರಂದರ ವಿಠಲನಾಜ್ಞೆ ॥

(೨) ಹರಿ ನೀ ಎನಗೆ ಒಲಿವಂತೆ ಮಾಡು | ಒಲಿದರೆ ತಿರುವಂತೆ ಮಾಡು | ತಿರಿದರೆ ಆರು ನೀಡದಂತೆ ಮಾಡು | ಆರು ನೀಡಿದರೆ ಹೊಟ್ಟೆ ತುಂಬದಂತೆ ಮಾಡು | ಹೊಟ್ಟೆ ತುಂಬಿದರೆ ಒಟ್ಟೆ ದೊರೆಯದಂತೆ ಮಾಡು | ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು | ಇಂಬು ದೊರೆತರೆ ನಿನ್ನ ಪಾದಾರವಿಂದದಲ್ಲಿ ಸ್ಥಳ ಕೊಡೋ ಪುರಂದರವಿಠಲಾ ॥ —(ದಾ)

ಹೀಗೆ ಪುರಂದರದಾಸರು ಜನಮಂಡಲಿಯಲ್ಲೆಲ್ಲ ಧರ್ಮನೀತಿಗಳನ್ನು ಉಜ್ವಲಗೊಳಿಸುವ ಯತ್ನದಲ್ಲಿ ತಮ್ಮ ಜೀವಮಾನವನ್ನು ಕಳೆದು—

ನಾಂ॥ ವನಪತರ್ಯೆಂಬೂರ ಬಳಿಯಲ್ಲಿ ಪುಷ್ಯದಿ | ನೆರೆ ಬಂದ ಮಾವಾಸ್ಯೆಯಲ್ಲಿ ॥ ಪರಮ ಸದ್ಗತಿಯನ್ನು ಪಡೆದರು ಜನರೆಲ್ಲ | ಮರುಗುತಲಿರೆ ದುಃಖದಲ್ಲಿ ॥

ಈ ಪುರಂದರದಾಸರ ವಿಷಯದಲ್ಲಿ ವಿಜಯವಿಠಲರು ಬರೆದಿರುವದೇನೆಂದರೆ—

— ರಾಗ —

ಘೋರನರಕದಲ್ಲಿ ಬಿದ್ದು | ಅಪಾರಜೀವರು ಬಾಧೆಪಡುತಿರಲು | ಉದ್ಧಾರ ಮಾಡಿದ ನಾರದರು | ಶ್ರೀಹರಿಯ, ಅಜ್ಞಾನದಿ ಧರೆಯೊಳ್ | ಪುತ್ತೆಬಂದರು; | ಸರ್ವೋತ್ತಮನು ಶ್ರೀಹರಿ ನಾರಾಯಣನೇ ಎಂದು ಸಾರಿದರು; | ಇವರನ್ನು ಭಜಿಸೆ | ಮಾರಜನಕ ವಿಜಯವಿಠಲ | ಆರಿಗಾದರೂ ಒಲಿವ ಕಾಣಿರೋ ॥—(ದಾ)

ಹೀಗೆ ಪುರಂದರದಾಸರು ದಾಸವೃತ್ತಿಯಿಂದ ಜನ್ಮಸಾರ್ಥಕವನ್ನು ಮಾಡಿಕೊಂಡದ್ದನ್ನು ನೋಡಿಯೇ ಭಾಗವತಶಿರೋಮಣಿಗಳು ಕೀರ್ತನಾರಂಭದಲ್ಲಿ "ದಾಸನಾಗೆಲೊ ಮನುಜ" ಎಂದು ಉಪದೇಶ ಮಾಡಿರುವರು.

# ಕನಕದಾಸರು

## ಪೀಠಿಕೆ—ಭಕ್ತಿಮಾರ್ಗ

ಪೀಲು—ಆದಿತಾಳ

ಭಕ್ತಿಯನ್ನು ಪಿಡಿ ಈಗ; | ಮಾನವ | ಮುಕ್ತಿಯನ್ನು ಪಡೆ ಬೇಗ ॥ಪ॥ ಹರಿಗೆ ನೀನು ಬಹು | ಪರಿ ಶರಣೆಂದರೆ ॥ ಕರುಣದಿ ನಿನಗೊಬ್ಬ | ಗುರುವ ತೋರಿಪನು ॥೧॥ ಗುರುಕುಲವಾಸದಿ | ಪರಿಚರ್ಯೆಗೆಯ್ಯಲು ॥ ಪರತರಜ್ಞಾನವು | ನೆರೆ ಸಿದ್ಧಿಸುವದು ॥೨॥ ತಿಳಿವನದನು ಜನ | ರೊಳಗೆ ಹುಟ್ಟುವುದೆ ॥ ತಿಳಿಯಲು ಶ್ರೀಹರಿ | ಯೊಲಿಪ ಸೇವೆಯ್ಯೆ ॥೩॥

ಜಗತ್ತಿನಲ್ಲಿ ದೇವರನ್ನು ಭಜಿಸಿದರೆ ಬೇಕಾದ ಕಾರ್ಯಸಿದ್ಧಿಯಾಗುವದೆಂದು ಗೊತ್ತಿದ್ದರೂ ಜನರಿಗೆ ಆ ಕೆಲಸಕ್ಕೆ ಮನ ಬಗ್ಗದೆ ಇರುವದನ್ನು ನೋಡಿ ಕನಿಕರದಿಂದ ಹಿರಿಯರು ನೆನಪುಗೊಟ್ಟಿರುವದೇನೆಂದರೆ—

ತ್ರಿ॥ ನೀರ ಬೊಬ್ಬುಳಿಯಂತೆ ತೋರುತಿಹ ದೇಹದ | ಸಾರವರಿಯದೆ ತಾನು ಸುಖಿಪುದಜ್ಞಾನದ | ದಾರಿಯಹುದೆಂದ ಸರ್ವಜ್ಞ ॥ —(ಸ.ಪ)

ದೇಹವು ನೆಲೆಯಲ್ಲವೆಂದು ಮನಗಂಡ ಒಬ್ಬ ಭಕ್ತನು ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವದೇನೆಂದರೆ—

— ಝುಂಪೆ —

ವೃ॥ ಸುಡುವೆನ್ನ ಹೆಣದ ನೆಲ ನುಡುತಲಿದೆ; ಸತತವುಂ—ಬಿಡದೆ ಹೊಗೆಯೇಳುತ್ತಿದೆ; | ಹಡೆಯುತಿಹರೆನಿತೊ ತಾಯಿಯರೆನ್ನನೀ ವ್ಯಥೆಯ—ಬಿಡಿಸಬಾರದೆ ಕರುಣದೆ? ॥ ತಡೆಯದೆನ್ನಯ ದೇಹಗಳನು ಗೃವಜನಕ್ಕೆ—ಬಿಡುವಾಗಲಿಂದು ಮುದದೆ | ನಡೆನಡೆದು ಜನ್ಮಕ್ಕೆ ಕಾಲುನೊಂದಿಹವೆನಗೆ—ಮೃಡ ನೋಡು ಕಣ್ಣಿಂದೆ ॥ —(ಹ. ಹಂ)

ಈ ಗುಟ್ಟನ್ನರಿಯದೆ ಕೆಟ್ಟುಹೋಗುತ್ತಿರುವವರನ್ನು ನೋಡಿ ಮರುಕದಿಂದ ಭಾಗವತರು ಹಾಡಿರುವದೇನೆಂದರೆ—

## ಮುಖಾರಿ–ಝಂಪೆ

ಸಟೆಯು ಸಂಸಾರ ನಾಟಕವೆಂದು ತಿಳಿಯದೆ | ದಿಟಬುದ್ಧಿಯಿಂದ ಕೆಡುತಿಹರೇಕೆ ನರರು ? ॥ ಪ ॥ ಹೊನ್ನುಹಣಾವೃಕ್ಷವನ ಬನ್ನಿ ಕುಳ್ಳಿರಿಯೆಂದು । ಮನ್ನಿಸುವರಧಿಕಸಂಭ್ರಮದಿಂದಲಿ ; ॥ ಉನ್ನತೈಶ್ವರ್ಯವಿಲ್ಲದ ಬಡವ ತಾ ಬರಲು | ಕುನ್ನಿಯೆನ್ನುತಲಟ್ಟುವರು ಮೂಢತನದಿ ॥ ೧ ॥ ಬಡವ ತಾನಾದರೆ ಆತ್ಮತಾ ಬಡವನೆ ? | ಕಡುಭಾಗ್ಯನಾಗಿ ಮತ್ತೊರ್ವ ಬಲ್ಲಿದನೇ ? ॥ ಬಿಡದೆ ಮಣ್ಣಿನೊಳಿದ್ದ ಚಿನ್ನವದು ಕೆಡುವದೇ? । ಬಡವ ಬಲ್ಲಿದನೆಂಬ ನುಡಿ ಆತ್ಮಗುಂಟೇ? ॥೨॥ ಎನುತಲೀ ಮಾಯಾಮೋಹಕವೆಂಬ ಶರಧಿಯೊಳು । ಅನುದಿನದಿ ಮುಳುಗಿ ಕೋಟಲೆಯುಗೊಳಿಸಿ ॥ ಚಿನುಮಯಾತ್ಮಕ ಪುರಂದರ ವಿಠಲನ ನೆನೆದು | ಘನಸುಖದ ಪದವಿ ಈವನ ಭಜಿಸಿರಯ್ಯಾ ॥ ೩ ॥ —(ದಾ)

ಹಾಗಾದರೆ ದೇವರನ್ನೊಲಿಸಿಕೊಳ್ಳುವದಕ್ಕೇನು ಮಾಡಬೇಕೆಂದರೆ —

ಶ್ಲೋ॥ ನ ಸಾಧಯತಿ ಮಾಂ ಯೋಗೋ, ನ ಸಾಂಖ್ಯಂ, ಧರ್ಮ, ಉದ್ಧವ, । ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ ॥ — (ಸಂ. ಭಾಗ)

ಅ॥ ಉದ್ಧವನೇ ಕೇಳು (ಎಂದು ಶ್ರೀಕೃಷ್ಣನು ಹೇಳಿದ್ದು). ನನ್ನ ಮೇಲಿನ ಶ್ರೇಷ್ಠವಾದ ಭಕ್ತಿಯಿಂದ ಹೇಗೊ ಹಾಗೆ ಯೋಗದಿಂದಾಗಲಿ, ವಿಚಾರದಿಂದಾಗಲಿ, ಬೇರೆ ಬೇರೆ ಕರ್ಮಗಳಿಂದಾಗಲಿ, ವೇದವನ್ನೋದುವದರಿಂದಾಗಲಿ, ತಪಸ್ಸಿನಿಂದಾಗಲಿ, ದಾನದಿಂದಾಗಲಿ ನನ್ನನುಗ್ರಹವು ದೊರೆಯುವದಿಲ್ಲ.

ಇದೇ ಅಭಿಪ್ರಾಯವನ್ನೇ ಒಬ್ಬ ಭಕ್ತಶಿರೋಮಣಿಗಳು ಹೇಳಿರುವದೇನೆಂದರೆ—

ಶ್ಲೋ॥ ಆಮ್ನಾಯಾಭ್ಯಸನಾನ್ಯರಣ್ಯರುದಿತಂ ; ಕೃಚ್ಛ್ರವ್ರತಾನ್ಯನ್ವಹಂ। ಮೇದಶ್ಛೇದ ಪದಾನಿ ; ಪೂರ್ತವಿಧಯಃ ಸರ್ವಂ ಹುತಂ ಭಸ್ಮನಿ; ॥ ತೀರ್ಥಾನಾಮವಗಾಹನಾನಿ ಚ ಗಜಸ್ನಾನಂ ; ವಿನಾ ಯತ್ಪದ । ದ್ವಂದ್ವಾಂಭೋರುಹ ಸಂಸ್ಮೃತಿಂ ವಿಜಯತೇ ದೇವಃ ಸ ನಾರಾಯಣಃ ॥ —(ಮು. ಮಾ)

ಅ॥ ಯಾವ ಪರಮಾತ್ಮನ ಪಾದಸ್ಮರಣೆಯಿಲ್ಲದೆ ವೇದವನ್ನೋದಿದ್ದು ಅರಣ್ಯದಲ್ಲಿ ಅತ್ತಹಾಗೆಯೂ ಪ್ರತಿದಿನದ ಕಷ್ಟಕರವಾದ ಅನೇಕ ವ್ರತಗಳು ಮೇದಸ್ಸನ್ನು ಕರಗಿಸುವವೂ ಬಾವಿ, ತೋಪು-ಮೊದಲಾದವುಗಳೆಲ್ಲ ಬೂದಿಯಲ್ಲಿ ಹೋಮವನ್ನು ಮಾಡಿದಂತೆಯೂ ತೀರ್ಥಗಳಲ್ಲಿ ಮುಳುಗಿದ್ದು ಆನೆಯು ಮೈತೊಳೆದಹಾಗೆಯೂ ಆ ದೇವನು ನಾರಾಯಣನೆಂದು ಶೋಭಿಸುತ್ತಿರುವನು.

ಈ ಭಕ್ತಿಯನ್ನು ಮಾಡುವದಕ್ಕೆ ಜಾತಿ ಮೊದಲಾದವುಗಳ ಕೀಳುಮೇಲುಗಳೇನೂ ಅಡ್ಡ ಬರುವದಿಲ್ಲವೆಂತೆಂದರೆ—

ಶ್ಲೋ॥ ವ್ಯಾಧಸ್ಯಾಚರಣಂ, ಧ್ರುವಸ್ಯ ಚ ವಯೋ, ವಿದ್ಯಾ ಗಜೇಂದ್ರಸ್ಯ ಕಾ? । ಕಾ ಜಾತಿರ್ವಿದುರಸ್ಯ ? ಯಾದವಪತೇರುಗ್ರಸ್ಯ ಕಿಂ ಪೌರುಷಂ ? ॥ ಕುಬ್ಜಾಯಾ ಕಮನೀಯರೂಪಮಧಿಕಂ । ಕಿಂ ತತ್ಸುದಾಮ್ನೋ ಧನಂ । ಭಕ್ತ್ಯಾ ತುಷ್ಯತಿ ಕೇವಲಂ ನ ತು ಗುಣೈರ್ಭಕ್ತಿಪ್ರಿಯಃ ಕೇಶವಃ ॥ —(ಸು)

ಅ॥ ವಾಲ್ಮೀಕಿಕನಲ್ಲಿದ್ದ ಬೇಡರ ಆಚರಣೆಯೇನೊಳ್ಳೆಯದೆ? ಧ್ರುವನ ವಯಸ್ಸೇನು? ಗಜೇಂದ್ರನ ವಿದ್ಯೆಯೇನು? ವಿದುರನ ಜಾತಿಯಾವದು? ಯಾದವರರಸನಾದ ಉಗ್ರಸೇನನ ಪೌರುಷವೇನು? ಕುಬ್ಜೆಯ ರೂಪೇನು ಹೆಚ್ಚು? ಸುದಾಮನ ಐಶ್ವರ್ಯವೇನು? ದೇವರು ಭಕ್ತಿಯಿಂದ ತೃಪ್ತನಾಗುವನೆ ಹೊರತು ಗುಣದಿಂದಲ್ಲ.

ಭಕ್ತಿವಂತನೇ ಕುಲವಂತನೆಂದು ದಾಸರು ಹೇಳಿರುವದೇನೆಂದರೆ—

ಪೂರ್ವಿ—ಅಟತಾಳ.

ಕುಲ ಕುಲ ಕುಲ ಕುಲ ಕುಲವೆನ್ನುತಿಹರೋ। ಕುಲ ಯಾವದು ಸತ್ಯಸುಖವುಳ್ಳವರಿಗೆ? ॥ ಪ ॥ ಕೆಸರೊಳು ಪುಟ್ಟಿದ ತಾವರೆಯನು ತಂದು। ಬಿಸಜನಾಭಸಿಗರ್ಪಿಸಲಿಲ್ಲವೆ? ॥ ಹಸುವಿನ ಮಾಂಸದೊಳುತ್ಪತ್ತಿಕ್ಷೀರವು। ವಸುಧೆಯೊಳಗೆ ಭೂಸುರರುಣಲಿಲ್ಲವೆ? ॥ ೧ ॥ ಮೃಗಗಳ ಮೈಯಲ್ಲಿ ಪುಟ್ಟಿದ ಕಸ್ತೂರಿ। ತಿಗೆದು ಪೂಸುವರು ಸುರರೆಲ್ಲರು; ॥ ಬಗೆಯಿಂದ ನಾರಾಯಣನ್ಯಾವ ಕುಲದವ? । ಅಗಜಾವಲ್ಲಭನೇತರ ಕುಲದವನು? ॥ ೨ ॥ ಆತ್ಮ ಯಾವ ಕುಲ? ಜೀವ ಯಾವ ಕುಲ? । ತತ್ತ್ವಪಂಚೇಂದ್ರಿಯ ಕುಲ ಯಾವದು? ॥ ಆತ್ಮಾಂತರಾತ್ಮ ನೆಲೆಯಾದಿಕೇಶವ; । ಆತನೊಲಿದ ಮೇಲೆ ಯಾತರ ಕುಲವೊ! ॥ ೩ ॥ —(ದಾ)

ಹೀಗೆ ಎಲ್ಲ ಜಾತಿಯವರೂ ಮಾಡಬಹುದಾದ ನಾಮಸ್ಮರಣೆಯ ಫಲವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಶ್ಲೋ॥ ಸತ್ತ್ವಪ್ರಧಾನಾಸಿ ಜಗಾದ ಯಾಸ್ಕೋ; ॥ ನಾಮಾನಿ ಗೀತಾಸು ತು ವಾಸುದೇವಃ। ಸತ್ತ್ವಂ ಸುಖೇ ಸಂಜಯತೀತ್ಯವೋಚನ್ನಾಮ್ನೈವ ತಸ್ಮಾತ್ಸ್ಮ ಹತೇ ಸುಖಾಯ ॥ —(ಸು. ಲಾ)

ಅ॥ ನಾಮಗಳು ಸತ್ತ್ವಗುಣವನ್ನುಂಟುಮಾಡತಕ್ಕವುಗಳೆಂದು ಯಾಸ್ಕರು ಹೇಳಿದ್ದಾರೆ; ಸತ್ತ್ವಗುಣದಿಂದ ಸುಖವು ಉಂಟಾಗುವದೆಂದು ಗೀತೆಯಲ್ಲಿ ಕೃಷ್ಣನು ಹೇಳಿದ್ದಾನೆ. ಆದ್ದರಿಂದ ನಾಮವೇ ಸುಖಕ್ಕೆ ದೊಡ್ಡ ಸಾಧನ.

ಆದ್ದರಿಂದ ಒಬ್ಬ ಮುಮುಕ್ಷು ತನ್ನ ಮನಸ್ಸನ್ನು ಬೇಡಿಕೊಂಡಿರುವದೇನೆಂದರೆ—

ಸೀ॥ ಸಕಲಜೀವಾಧಾರನಾಗಿ ಶೋಭಿಸುತಿಹನು ;—ಸಕಲ ದೋಷವಿಮುಕ್ತನಾಗಿರುವನು ; । ಸಕಲಸತ್ಕೀರ್ತಿಸಂತತಿಗೆ ನೆಲೆವನೆಯಹನು ;—ಸಕಲ ಸೌಂದರ್ಯಸ್ವರೂಪನಹನು ; । ಸಕಲಸದ್ಗುಣಗಳನು ಪ್ರಕಟಮಾಡುವನಹನು ; ಸಕಲಸದ್ವೃತ್ತಿಗಳ ದಾತನಹನು ; । ಸಕಲಲೋಕಸೃಷ್ಟಿಸ್ಥಿತಿನಾಶಕರನಹನು—ಸಕಲಭಕ್ತಾಭೀಷ್ಟದಾತನಹನು ; ॥ ಸಕಲಭಕ್ತರ ಹೃದಯಕಮಲದಲ್ಲಿ । ಸುಖರೂಪಿನಿಂದ ತೋರುತ್ತಲಿಹನು ; । ಅಕುಟಿಲಾಂತಃಕರಣಾವೃತ್ತಿಯಲ್ಲಿ । ಸುಖದಿಂದ ಸ್ಮರಿಸವನ ಮನವೆ ನೀನು ॥ —(ಕೆ. ಸಂ)

ಭಕ್ತಿಗೆ ಪರಮಾತ್ಮನು ವಶನಾಗುವನೆಂಬುದನ್ನು ಉದಾಹರಣೆಯೊಡನೆ ದೊಡ್ಡವರು ಹೇಳಿರುವದೇನೆಂದರೆ—

ಶ್ಲೋ॥ ಭಾವೇನ ದೇವಂ, ಕಲಯಾ ನರೇಂದ್ರಂ, । ಧನೇನ ಕಾಂತಾಂ, ಕಪಟೇನ ಶತ್ರುಮ್, ॥ ಸತ್ಯೇನ ಮಿತ್ರಂ, ಕೃಪಯಾ ಚ ಪುತ್ರಂ, । ಜ್ಞಾನೇನ ಮೋಕ್ಷಂ ವಶಮಾನಯಂತಿ ॥ —(ಸು)

ಅ॥ ಭಕ್ತಿಯಿಂದ ದೇವನನ್ನೂ ವಿದ್ಯೆಯಿಂದ ರಾಜನನ್ನೂ ಹಣದಿಂದ ಸ್ತ್ರೀಯನ್ನೂ ಮೋಸದಿಂದ ಹಗೆಯನ್ನೂ ನಿಜದಿಂದ ಗೆಳೆಯನನ್ನೂ ದಯೆಯಿಂದ ಮಗನನ್ನೂ ಜ್ಞಾನದಿಂದ ಮೋಕ್ಷವನ್ನೂ ವಶಮಾಡಿಕೊಳ್ಳುತ್ತಾರೆ.

ಭಗವಂತನ ಅನುಗ್ರಹವನ್ನು ಪಡೆಯುವುದಕ್ಕಾಗಿ ವೈರಾಗ್ಯವನ್ನು ಹೊಂದಿದವನ ಯೋಗ್ಯತೆಯನ್ನು ಕುರಿತು ಕವಿ ಹೇಳುವದೇನೆಂದರೆ—

ವೃ॥ ಪಳಿಯ ಪೊದಲ್, ಪರಾಭವದ ಮೊತ್ತಮೊದಲ್, ಖಳಮೋಹಲೋಭರೆಂ । ಬಳಿವರ ಬಾಳ್ಕೆಮದಲ್, ಬಳೆದ ಕರ್ಮದ ಬಿಳ್ತುಮೊದಲ್, ನಿತಾಂತಮೆಂ॥ ದಳಿವುವ, ಕಾಮ, ಪರ್ಚಿಸುವ ಚಿಂತೆಯನರ್ಥದೊಳುಂಟುಮಾಡದೊ । ಳ್ಪಳಿಯದೆ ಮೋಹಮುಂ ಬಿಸುಟ ಮಾನಸರಿಲ್ಲಿಯೆ ದೇವರಲ್ಲವೇ? ॥ —(ಜೀ. ಸಂ)

ಟಿ॥ ಪಳಿ—ನಿಂದೆ. ಪರಾಭವ—ಸೋಲು. ಬಿಳ್ತು—ಬಿತ್ತನೆ. ಅಳಿವುವ—ಹಾಳುಮಾಡುವ. ಒಳ್ಪು ಅಳಿಯದೆ—ತನ್ನ ಒಳ್ಳೆಯತನವನ್ನು ಬಿಡದೆ.

ಆದ್ದರಿಂದಲೆ ಕೀರ್ತನಾರಂಭದಲ್ಲಿ ಭಾಗವತರು "ಭಕ್ತಿಯನು ಪಿಡಿ ಈಗ" ಎಂದು ಉಪದೇಶಮಾಡಿರುವರು. ಭಕ್ತಿಯಿಂದ ಭಗವದನುಗ್ರಹಕ್ಕೆ ಪಾತ್ರನಾದದ್ದಕ್ಕೆ ನಿದರ್ಶನವಾಗಿ ಕನಕದಾಸರ ಕಥೆಯು ನಿರೂಪಣ ಮಾಡಲಾಗುವದು.

## ಆಖ್ಯಾನ

ಕೀ॥ ಬಾಡದೊಳಿದ್ದನು ಬಚ್ಚಮ್ಮಯೆಂಬುವಳ । ಕೂಡಿ ಭಕ್ತ ಬೀರೇಗೌಡ; । ನಾಡ ಗೌಡಿಕೆಯೊಳಂಡೇಕುರುಬನು । ಹಾಡುತಿರ್ದರಾತನ ಪಾಡ ॥

ಧರ್ಮದಿಂದಲೂ ದರ್ಪದಿಂದಲೂ ಗೌಡಿಕೆಯನ್ನು ಮಾಡುತ್ತಿದ್ದ ಅವನು—

ಸಾಂ॥ ಬ್ರಹ್ಮತಂತ್ರ ಶ್ರೀನಿವಾಸಾಚಾರ್ಯರಿಗೊಮ್ಮನದಿಂ ಶರಣೆಂದು । ನಿರ್ಮಲವೈಷ್ಣವನಾಗಿ ಭಜಿಸಿದನು ತಿಮ್ಮಪ್ಪನ ತಾನಂದು ॥

ಬೀರೇಗೌಡನು ಒಮ್ಮೆ ಮಕ್ಕಳಿಲ್ಲದ ಚಿಂತೆಯಿಂದ ಹೆಂಡತಿಗೆ ಹೇಳಿದ್ದು—

ಕಂ॥ ರವಿಯಿಲ್ಲದ ಸಭೆ, ಕೋಕಿಲ । ನವಿಲಿಲ್ಲದ ವನ, ಸರೋಜವಿಲ್ಲದ ಕೊಳ ತಾಂ, ॥ ಕುವರರ್ಕಳಿಲ್ಲದಾ ಗೃಹ, । ನವಮೋಹನೆ, ಲಾಲಿಸಿವುಗಳ ಹುದು ಶ್ಮಶಾನಂ ॥ —(ಕ. ದಾ. ಚ)

ಅಷ್ಟು ಹೊತ್ತಿಗಾಗಲೆ ಮುದುಕಿಯಾಗುತ್ತ ಬಂದಿದ್ದ ಬಚ್ಚಿಯು ಗಂಡನಿಗೆ ತನ್ನ ಆಲೋಚನೆಯನ್ನು ಹೇಳಿ ತಿರುಪತಿಯ ಯಾತ್ರೆಗೆ ಹೊರಡಿಸಿದಳು. ಬೀರೇಗೌಡನು ತಿಮ್ಮಪ್ಪನ ಬಳಿಗೆ ಬಂದು ನಿಂತು ಬೇಡಿಕೊಂಡದ್ದು —

ಜೂ॥ ದಯಮಾಡೊ ದೇವದೇವೇಶ, ಪಾಪ-ಜಯವನ್ನು ಕಳೆಯೋ ರಮೇಶ, ಕುಲಕೆ-ಜಯವ ಕೊಡು ಸೂರ್ಯಸಂಕಾಶ, ವಿಷಯ-ಸಯಗಳಿಗೆ ನೀನೆ ಆವಾಸ, ಭಕ್ತಿಮಯನೆನಿಸಿ ಹರಿಯೆನ್ನ ಪಾಶ, ದುಃಖ-ಲಯವಾಗೆ ಬರಿಸು ಸಂತೋಷ, ಮಂದಹಾಸ, ಸುಜನಪೋಷ, ತಿರುಪತೀಶ । ಕೊಡು ಕೊಡೆನಗೊಬ್ಬನನು ಮಗನ, ದೇವ-ರಡಿಯ ಸೇವೆಯ ಮಾಡುವವನ, ಜಗಕೆ-ಕೊಡಗೈಯನಾಗಿ ಬಾಳ್ವವನ, ಜನರ-ಜಡತೆಯನು ಹೋಗಗೊಳಿಸುವವನ, ಕುಲದ- ಹಡೆಯ ಮೇಲಕ್ಕೆತ್ತುವವನ, ಮೋಹ-ಒಡದೆ ಭೂಮಿಯೊಳು ನಡೆವವನ, ಒಳ್ಳೆ-ನಡೆನುಡಿಗಳನ್ನು ತೋರ್ಪವನ, ಮನೋಹರನ, ಸುಖಂಕರನ, ಗುಣಾರ್ಣವನ, ಕೃಪಾಕರನ । ಮಗನಿಂದ ಗತಿಯೆನಗೆ ಬರಲಿ, ದೇವಾ-ಖಗಗಮನ ನಿನ್ನದಯೆ ಬರಲಿ, ಎನಗೆ-ಜಗದ ಜಂಜಡವಾಗದಿರಲಿ, ನೀನು-ಝುಗಿಝುಗಿಸುತಿರು ಮನಸ್ಸಿನಲಿ, ಕೇಳು-ನಗಧರನೆ ಇದನು ಚಿತ್ತದಲಿ, ನಿನ್ನ ನೆನೆಗನೆನಗೆ ಸುಖವನ್ನು ಕೊಡಲಿ ॥

ಇದರಿಂದಾದ ಫಲವೇನೆಂದರೆ—

ಸಾ॥ ಕನಸಿನೊಳಗೆ ತಾ ಪ್ರಸಾದಮಂಡೆಯ । ತಿನಲಿತ್ತನು ತಿಮ್ಮಪ್ಪ; ॥ ಅನುನಯದಿಂದೆರಗುತೆ ಕೈಕೊಂಡನು । ತಿನಲದನಾ ಬೀರಪ್ಪ ॥

ಆ ಪ್ರಸಾದದ ಪ್ರಭಾವವಾಗ—

ಕು॥ ಆನಂದವತ್ಸರದಿ । ಮಾಸಿತದ ಕಾರ್ತಿಕದಿ । ಮಾಸಿತನು ಬಹುಳತದಿಗೆಯ ತಿಥಿಯೊಳು ॥ ತಾನುದಿಸಿದನು ಮಗನು । ದಾಸಿ ಗುರುವಾರದೊಳು । ಮಾನವರು ಹೊಗಳುತಿರೆ ಸಂಭ್ರಮದೊಳು ॥

ಆ ಮಗುವಿನ ಜನ್ಮವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಭಾ॥ ಉದಯಗಿರಿ ಶಿಖರಾಗ್ರದಲಿ ರವಿ । ಯುದಯಿಸಿಯೆ ಲೋಕದ ತಮಸ್ಸವ। ನದೆದು ಸರ್ವಚರಾಚರಾತ್ಮರ ನಲಹುವಂದದಲಿ ॥ ಒದೆದು ಜನ್ಮಾಂತರದ ಕರ್ಮವ । ಪದುಮದಳನಿಭನೇತ್ರಸಂಪ್ರಿಯ । ಮುದದಿ ಹೊಂದುವ ಕಾರಣದ ಶಿಶುಪುಟ್ಟಲಾಕ್ಷಣದಿ ॥ —(ಕ. ದಾ. ಚ)

ಮಗುವಿಗೆ ತೊಟ್ಟಿಲಿಟ್ಟದ್ದು—

— ಝಂಪೆ —

ಲಾಲಿ ಲಾಲಿ ಕಂದ, ಮಲಗು ಆನಂದ, । ಲಾಲಿ ವೆಂಕಟೇಶನೊರದ ಸುಖವೃಂದ ॥ ಪ ॥ ಪಣೆಯೊಳಗೆ ಕಸ್ತೂರಿಯ ತಿಲಕವನೆ ನೂಡಿ । ಫಣಿವೇಣಿಯರು ಕಂಠಕಾಭರಣ ನೀಡಿ ॥ ಅಣುಗ, ನೀನಳದಿರೆಂದಾದರಣೆ ಮಾಡಿ । ಗುಣವಂತೆ

ಯರು ಎಲ್ಲ ಲಾಲಿಪದ ಪಾಡಿ ॥ ೧ ॥ ರನ್ನದುಡಿದಾರವನು ನಡುವಿಗೆ ಬಿಗಿಸಿ । ಚೆನ್ನಕಾಲಂದುಗೆಯ ಪದಗಳಿಗೆ ತೊಡಿಸಿ ॥ ಚಿನ್ನದ ತೊಟ್ಟಿಲೊಳು ಚಿದ್ವಸ್ತ್ರ ಹಾಸಿ । ಮುನ್ನ ಜನ್ಮಾಭಾವದಂಬರವ ಹೊಂದಿಸಿ ॥ ೨ ॥ ಅಂಕಿತವು ಬಾಲನಿಗೆ ತಿಮ್ಮನೆಂದೆನಿಸಿ । ಮಂಕುಮಾಯೋತ್ಪನ್ನ ಜಗವನ್ನು ಮರೆಸಿ ॥ ಪಂಕಜ ಗಂಧಿಮುಕ್ತಾಂಬೆಯೊಳ್ ಬೆರೆಸಿ । ಓಂಕಾರನಾದ ಚಿದ್ಬಯಲ ತಾನೆನಿಸಿ ॥ ೩ ॥

—(ಕ. ದಾ. ಚ)

ತಿಮ್ಮನು ಬೆಳೆಯುತ್ತ ಬೆಳೆಯುತ್ತ ಆಟವನ್ನಾಡುತ್ತಿದ್ದದ್ದು—

ಚೌ॥ ಕಲ್ಲ ಚೂರನು ದೇವನಿವನೆನು-ತಲ್ಲವನು ಪೂಜಿಸುವನು; । ಮೆಲ್ಲನೇ ಕಾಂತವನು ಸೇರುತ್ತಲ್ಲಿ ದೇವರ ನೆನೆವನು; ॥ ಲಲ್ಲೆಯಾಡಲು ಬಂದ ಹುಡುಗರಿ-ಗೆಲ್ಲ ಭಜನೆಯ ಹೇಳ್ವನು; । ಸೊಲ್ಲಿಸದೆ ತನ್ನನ್ನವನು ತಂ-ದಲ್ಲಿ ದೇವರಿಗಿಡುವನು ॥

ಹೀಗಿರುತ್ತಿರುವಾಗ—

ದಿಂ॥ ನೋಡಿದಲ್ಲೆಲ್ಲಾ ನಿಧಿಯು ಕಾಣಲಾಗ । ತೋಡುತಾ ಧನವಂ ದಾನಗೆಯ್ಯೆ ಬೇಗ ॥ ನಾಡಗೆಲ್ಲಾ ಸೌಭಾಗ್ಯವಾಯಿತೆಂದು । ಪಾಡೆ ಲೋಗ ತರ್ಪವನ ಕನಕನೆಂದು ॥

ಹೀಗೆ ನಿಧಿಯು ಕಾಣುವದು ಅಸಂಭವವೇನೂ ಅಲ್ಲ—

ಸೂ॥ ಅಸ್ತೇಯಪ್ರತಿಷ್ಠಾಯಾಂ ಸರ್ವರತ್ನೋಪಸ್ಥಾನಮ್ ॥

—(ಯೋ. ಸೂ)

ಅ॥ ಕದಿಯದಿರುವಿಕೆ ನೆಲೆಗೊಂಡರೆ ಎಲ್ಲ ರತ್ನಗಳೂ ವಶವಾಗುವವು.

ದೊಡ್ಡವನಾಗುತ್ತಲಿ ಕನಕನಿಗೊದಗಿದ ಪರಿಸ್ಥಿತಿಯೇನೆಂದರೆ—

ಶ॥ ಆನೆಯಗೊಂದಿಯ । ಮಾನವರೊಡೆಯರ । ಧೀನನಾದ ನಾಯಕನಾಗಿ ॥ ಮಾನವ ಪಡೆದನು । ಮಾನವರೆಲ್ಲರ । ಮಾನರಕ್ಷಕನು ತಾನಾಗಿ ॥

ಇದರ ಜೊತೆಗೆ—

ಭೋ॥ ಕನಸಿನೊಳಗೆ ತಿರುಪತೀಶ । ನನಿತು ಕಾಣಿಕೆಯನು ಮುಂದೆ । ಕನಕನಾಯಕನಿಗೆ ಕೊಡಲು ತಪ್ಪದೆಲ್ಲವು ॥ ತನಗೆ ಸಲುವವೆಂದು ಪೇಳೆ । ಜನರ ಗುಂಪು ಗುಂಪು ಬಂದು । ಹಣದ ರಾಶಿಯನ್ನು ಸುರಿಯುತಿದ್ದರೆಲ್ಲರು ॥

ಇದನ್ನೆಲ್ಲ ಅವನು ಜನರ ಹಿತಕ್ಕಾಗಿ ಉಪಯೋಗಿಸುತ್ತಿದ್ದನಲ್ಲದೆ—

ಕೀ॥ ಕಾಗಿನೆಲೆಯೊಳಿರ್ಪಾದಿ ಕೇಶವನಿ । ಗಾಗಿ ಮಂಡಪಾದಿಗಳನ್ನು ॥ ಭೋಗಭೂಮಿಯಾದುತ್ಸವಗಳನನು । ರಾಗದಿ ಬೆಳೆಸಿದನೆಲ್ಲವನು ॥

ಇಂಥ ಸಜ್ಜನರನ್ನು ಕಂಡರೆ ಸಾಮಾನ್ಯವಾಗಿ ಕ್ಷುದ್ರಪ್ರಾಪಂಚಿಕರಿಗೆ ಆಗುವದಿಲ್ಲ—

ಶ್ಲೋ॥ ಊರ್ಜಿತಂ ಸಜ್ಜನಂ ದೃಷ್ಟ್ವಾ ದ್ವೇಷ್ಟಿ ನೀಚಃ ಪುನಃಪುನಃ । ಕವಲೀಕುರುತೇ ಸ್ವಸ್ಥಂ ವಿಧುಂ ದಿವ ವಿಧುಂತುದಃ ॥ —(ಸು)

ಅ|| ಸಜ್ಜನರ ಏಳಿಗೆಯನ್ನು ಕಂಡರೆ ನೀಚರು ಮತ್ತೆ ಮತ್ತೆ ಹಗೆತನವನ್ನು ಮಾಡುವರು. ತನ್ನಷ್ಟಕ್ಕೆ ತಾನಿರುವ ಚಂದ್ರನನ್ನು ರಾಹು ಹಗಲಿನಲ್ಲಿಯೇ ನುಂಗಿಬಿಡುವನು.

ಆದ್ದರಿಂದ ಅವರು ಚಾಡಿಯನ್ನು ಹೇಳಿ ಅವನ ನಾಯಕತನವನ್ನು ನುಂಗಿ ನೀರು ಕುಡಿದರು. ಆಮೇಲೆಯೂ ಅವನು ಬೇಟೆ ಮೊದಲಾದ್ದರಲ್ಲಿಯೇ ಕಾಲವನ್ನು ಕಳೆಯುತ್ತಿರಲು ಒಂದು ದಿನ ಅವನಿಗೆ ಕನಸಾದದ್ದೇನೆಂದರೆ—

ವ|| ಎಲೋ ಕನಕಾ, ಕೈಯಲ್ಲೇನು ಶುನಕ, ಮಾಡುವಿಯೇನು ಮುರಕ, ಸೇರುವಿಯಲ್ಲೋ ನರಕಾ, ಎನಗಾಗಿದೆ ಮರುಕ, ದಾಸನಾಗೋ ತಿರುಕಾ||

—(ಕ. ಮ. ಅ)

ಎಚ್ಚೆತ್ತ ಕನಕನು ಹಾಗೆ ಆಗುವದನ್ನೆ ನಿಶ್ಚಯಿಸಿ ತನ್ನ ಧನ್ಯತೆಯನ್ನು ಕುರಿತು ಹಾಡಿದ್ದು—

ಮುಖಾರಿ—ಝಂಪೆ.

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು; | ಪದುಮನಾಭನ ಪಾದ ದೊಲಿಮೆ ಎನಗಾಯಿತು || ಪ || ಹರಿತೀರ್ಥಪ್ರಸಾದ ಜಿಹ್ವೆಗೆ ದೊರಕಿತು; | ಹರಿಯ ನಾಮಾಮೃತವು ಕಿವಿಗೊದಗಿತು; || ಹರಿದಾಸರು ಎನ್ನ ಬಂಧುಗಳಾದರು; | ಹರಿಯ ಶ್ರೀಮುದ್ರೆ ಎನಗಾಭರಣವಾಯ್ತು || ೧ || ಮುಕ್ತರಾದರು ಎನ್ನ ನೂರೊಂದು ಕುಲದವರು; | ಮುಕ್ತಿಮಾರ್ಗಕೆ ಯೋಗ್ಯ ನಾನಾದೆನು; || ಅಕಲಂಕಶ್ರೀಹರಿಭಕುತಿಗೆ ಮನ ಬೆಳೆದು | ರುಕ್ಮಿಣಿಯರಸ ಕೈವಶನಾದನೆನಗೆ || ೨ || ಇಂದೆನ್ನ ಜೀವಕ್ಕೆ ಸಕಲಸಂಪದವಾಯ್ತು; | ಮುಂದೆನ್ನ ಜನ್ಮಸಾಫಲ್ಯವಾಯ್ತು; || ತಂದೆ ಶ್ರೀಕಾಗಿನೆಲೆಯಾದಿಕೇಶವರಾಯ | ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ || ೩ || —(ದಾ)

ಹೀಗೆ ಯೋಚಿಸಿ ಅವನು ವ್ಯವಹಾರವನ್ನು ತುಚ್ಛವಾಗಿ ಕಂಡದ್ದು—

ರ|| ಕೆಟ್ಟದ್ದು ಹೋಗು ಸಂಸಾರ | ದೋಷಗಳೊಳು ನೋಡೆ ಅಪಾರ | ಇರದು ಯಾವಾಗಲೂ ಈನೇರ | ಹುಟ್ಟಿಸುವದು ಯಮನಿಗೆ ಕ್ರೂರ | ವೈಕುಂಠ ಪದವಿಯೆಂಬುದದು ದೂರ | ಅದರಿಂದಲು ಬಿಟ್ಟು ರಾಜ್ಯಭಾರ | ಪ್ರವೇಶಿಸಿ ಕಾಂತಾರ | ಅಲ್ಲಿ ಸೂರಿಜನಗಳಿಗೆ ಮಾಡಿ ಸತ್ಕಾರ | ಅವರು ಕೊಟ್ಟ ಆ ಮಂತ್ರಸಾರ | ಭಜಿಸುತಲಿದ್ದರೆ ಆ ಪ್ರಕಾರ | ನರಕವು ನನಗೆ ದೂರ | ಕೇಶವನ ಕರುಣವು ಪೂರ | ಇರುವದು ಸಾರೋದ್ಧಾರ || —(ಕ. ದಾ. ಚ)

ಹೀಗೆಂದು ಅವನು ನಿಶ್ಚಯ ಮಾಡಿದ್ದು—

ಶ್ಲೋ|| ಮಾ ರಾಜಕೃಪಾ, ಮಾ ರಾಮಾ, ಮಾ ಕುಮಾರಸುಖಗರಿಮಾ, | ಮಾರಾಜ, ಮಾ ಸ್ವಮಹಿಮಾ, ಪದಪದ್ಮಾರಾಧನೇಽಸ್ತು ತೇ ಪ್ರೇಮಾ ||

—(ಸು. ಲಾ)

ಅ|| (ಮಾ—ರಾಜ) ಲಕ್ಷ್ಮೀಪತಿಯೆ, ನನಗೆ ರಾಜರ ಕೃಪೆಬೇಡ; ಹೆಂಡತಿ ಬೇಡ, ಮಕ್ಕಳ ಸೌಖ್ಯ ಬೇಡ: ಕೀರ್ತಿಯೂ ಬೇಡ. ನಿನ್ನ ಪಾದಕಮಲಗಳ ಪೂಜೆಯಲ್ಲಿ ಪ್ರೇಮವಿರಲಿ.

ಈ ಸ್ಥಿತಿಯನ್ನು ಕವಿ ಶ್ಲಾಘಿಸಿರುವದೆಂತೆಂದರೆ—

ಕಂ|| ರೋಗಂ ರಿಣಮುಂ ಪಾಪಮು | ಮಾಗುರುತರ ಚಿಂತೆ ಪಾರತಂತ್ರ್ಯಮುಮೊಂದುಂ || ತಾಗದೆ ಪರಲೋಕಪ್ರ | ಜ್ಞಾಗತನಾಗಿರ್ಪುದೇ ಧರಿತ್ರೀಸ್ವರ್ಗಂ || —(ನ. ಶ)

ಕನಕನಾಯಕನು ಒಡನೆ ತನ್ನದನ್ನೆಲ್ಲ ದಾನಮಾಡಿ ಕನಕದಾಸನಾಗಿ ಏಕನಾದವನ್ನು ಹಿಡಿದು ಭಜನೆಯನ್ನು ಮಾಡುತ್ತ ತನ್ನ ಮನೆದೇವರಾದ ತಿಮ್ಮಪ್ಪನ ದರ್ಶನಕ್ಕಾಗಿ ತಿರುಪತಿಗೆ ಬಂದು ಹೇಳಿದ್ದು—

ವೃ|| ಅರಿದಮೆನೆಂದವಂಗರಿಯಬಾರದು ; ನಿನ್ನ ನಿಜಪ್ರಯತ್ನದಿಂ | ದರಿದಮೆನೆನ್ನದಂಗರಿಪು ಬರ್ಪುದು ; ನೀಂ ಕೃಪೆಮಾಡೆ ಚೋದ್ಯಮೇ ? || ನರಮುಮಂಗೆ ಸಿಲ್ಕದು ನಿಧಾನಮಯತ್ನಪರಂಗೆ ಭಾಗ್ಯದಿಂ | ದರಸದೆ ಸಿಲ್ಕುವಂತೆ ಪರಮಪ್ರಭುವೇ, ಮಹದ್ಯೆಪುರೀಶ್ವರಾ || —(ಏ. ಶ)

ಅಲ್ಲಿ ಸೇವೆಯನ್ನು ಮಾಡಿಕೊಂಡಿರಲಾಗಿ ಒಂದು ದಿವಸ—

ಕೀ|| ಸೋಸಲೆಯೊಳಗಿಹ ಪರಮಪೂಜ್ಯರಹ | ವ್ಯಾಸರಾಯಸ್ವಾಮಿಗಳಡಿಗೆ || ದಾಸನಾಗಿರೆಂದನು ಕನಸಿನೊಳಾ | ಶೇಷಗಿರೀಶನು ಭಕ್ತಸಿಗೆ ||

ಕನಕದಾಸನು ಅದರಂತೆ ಆ ಗುರುಗಳನ್ನು ಹುಡುಕಿಕೊಂಡು ಮಠದ ಬಳಿಗೆ ಬಂದಾಗ ಅನಾಗರಿಕವೇಷದಲ್ಲಿದ್ದ ಅವನನ್ನು ನೋಡಿ ಬಾಗಿಲಿನವರು ತಡೆದು ನೀನು ಯಾರೆಂದಾಗ ಅವನು ತನ್ನ ಅದುವರೆಗಿನ ತಿಳಿವಳಿಕೆಯನ್ನೆಲ್ಲ ಸೂಚನೆ ಮಾಡಿ ಹೇಳಿದ್ದು—

ಮುಖಾರಿ—ಝಂಪೆ

ನಾವು ಕುರುಬರು ; ನಮ್ಮ ದೇವರೋ ಬೀರಯ್ಯ ; | ಕಾವ ನಮ್ಮಜ್ಜ ನರಕುರಿಹಿಂಡುಗಳ || ಪ || ಅಷ್ಟಮದಮತ್ಸರಗಳೆಂತೆಂಬ ಟಗರುಗಳು | ದೃಷ್ಟಿಜೀವಾತ್ಮನೆಂಬೋ ಆಡು || ಸೃಷ್ಟಿಪ್ರಸಿದ್ಧವೆಂತೆಂಬುವಾ ಹೋತುಗಳು| ಕಟ್ಟಿ ಕೋಲಿನಲಿ ಇರುತಿರುವ ನಮ್ಮಜ್ಜ || ೧ || ವೇದಶಾಸ್ತ್ರಪುರಾಣವೆಂತೆಂಬ ಶ್ವಾನಗಳು | ಕಾದಿದ್ದ ನಮ್ಮಜ್ಜ ಹಿಂಡಿನೊಳಗೆ || ಹಾದಿ ಕಾಣದೆ ಕೂಗಿ ಬಾಯಾರಿ ಕಾಲ್ಗೆರಗ | ಲಾದರಿಸಿ ಅಂಬಲಿಯನೆರೆವ ನಮ್ಮಜ್ಜ || ೨ || ಅರಿಯೆಂಬ ಮರಿಗಳು ಹಿಂಡಿನೊಳಗೆ ಬಂದು | ಮಾರಿವ್ಯಾಘ್ರವೆಂತೆಂಬ ತೋಳ ಹೊಕ್ಕು || ಕುರುಬ ಹಿಂಝೂಮದಲಿ ಕುರಿಯ ಮುರಿವದು ಕಂಡು | ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ || ೩ || ಹುಟ್ಟೋದಕ್ಕೆ ಮೊದಲಿಲ್ಲ ಸಾವುದಕ್ಕೆ ಕೊನೆಯಿಲ್ಲ | ಹುಟ್ಟು ಸಾವಿನ ಹೊಲಬು ಬಲ್ಲ ನಮ್ಮಜ್ಜ || ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿಮಾಡಿ | ಹೊಟ್ಟೆತುಂಬಿದ ಹಾಗೆ ಕರೆವ ನಮ್ಮಜ್ಜ || ೪ || ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿಸುತ | ಕಲಿಯುಗಂಗಳನೆಲ್ಲ ಮರೆತ ನೀತ || ಜಲಜಾಕ್ಷ ಕಾಗಿನೆಲೆಯಾದಿಕೇಶವನ ಮನ | ವೊಲಿಸಿ ಭಜಿಸದವನು ಹುಚ್ಚುಕುರುಬ || ೫ || —(ದಾ)

ಹೀಗೆಂದು ಬಾಗಿಲಲ್ಲಿ ಕಾದಿದ್ದು ಗುರುಗಳು ಹೊರಗೆ ಬಂದ ಸಮಯವನ್ನು ನೋಡಿ ಶರಣೆಂದದ್ದು—

ಶ್ಲೋ॥ ಕರ್ಮಭಿರೇವ ಸ ಬೋಧೋ ಪ್ರಭವತಿ ಗುರುಣಾ ವಿನಾ ದಯಾಸಿಧಿನಾ ; | ಆಚಾರ್ಯವಾಸ್ತಿ ಪುರುಷೋ ವೇದೇತ್ಯರ್ಥಸ್ಯ ವೇದಸಿದ್ಧತ್ವಾತ್ ॥ —(ಸ್ವಾ. ನಿ)

ಅ॥ 'ದಯಾಲುವಾದ ಗುರುವಿಲ್ಲದೆ ಬರೀ ಕರ್ಮದಿಂದ ಜ್ಞಾನವಾಗುವದಿಲ್ಲ. ಗುರುವನ್ನು ಪಡೆದವನು ತಿಳಿಯುವನು' ಎಂದು ವೇದದಲ್ಲಿ ಸಿದ್ಧವಾಗಿರುವದರಿಂದ.

ಎಂದು ದೊಡ್ಡವರು ಹೇಳುವದನ್ನು ಕೇಳಿ ಮಾತ್ರ ಬಂದಿದ್ದೇನೆ. ನನ್ನ ಯೋಗ್ಯತೆಯಾದರೊ—

ಭಾ॥ ವೇದಶಾಸ್ತ್ರಪುರಾಣಪುಣ್ಯಾದ | ಹಾದಿಯನು ನಾನರಿಯೆ ; ತರ್ಕದ | ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ ॥ ಆದಿಮೂರುತಿ, ನೀನು ನೆರೆ ಕರುಣೋದಯನು ಹೃದಯಾಂಗಣದಿ ಜ್ಞಾ | ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ॥ —(ಹ. ಭ. ಸಾ)

ಈ ನನ್ನ ದೀನತೆಯನ್ನು ನೋಡಿ—

ಕಂ॥ ನವನೀತವಾನನನೆ, ನಾನವ | ನೀತನೆನಿಪ್ಪ ಭೇದವದು ನಿನಗುಂಟೇ? ॥ ನವನೀತಲದೊಳ್ ನನ್ನಂ | ನವನೀತಜ್ಞಾನವಿಭವನಂ ಮಾಡೊಲವಿಂ ॥ —(ಸೂ. ಶಾ)

ಟಿ॥ ನಾನು + ಅವನು + ಈತನು. ' ಉಂಟೇನು + ಅವನೀತಲದೊಳ್' ನವ + ನೀತ + ಜ್ಞಾನವಿಭವನಂ—ಹೊಸದಾಗಿ ಪಡೆದ ಜ್ಞಾನವೈಭವವುಳ್ಳವನನ್ನಾಗಿ.

ಅವನ ಸಚ್ಛಿಷ್ಯಸಂಪತ್ತನ್ನು ನೋಡಿ ಸಂತೋಷಪಟ್ಟು ಸ್ವಾಮಿಗಳು ಅವನನ್ನು ತಮ್ಮ ಬಳಿಯಲ್ಲಿಯೇ ಇಟ್ಟುಕೊಂಡು ಎಲ್ಲರ ಜೊತೆಯಲ್ಲಿ ಅವನಿಗೂ ತತ್ತ್ವೋಪದೇಶವನ್ನು ಮಾಡುತ್ತಿದ್ದು ಎಲ್ಲರಿಗಿಂತಲೂ ಅವನ ಮೇಲೆ ಹೆಚ್ಚಿನ ಪ್ರೇಮವನ್ನು ತೋರಿಸುತ್ತಿದ್ದರು. ಇದನ್ನು ನೋಡಿ ಅಸೂಯೆಗೊಂಡ ಶಿಷ್ಯರಿಗೆ ಬುದ್ಧಿಗಲಿಸುವದಕ್ಕಾಗಿ ಸ್ವಾಮಿಗಳು ಒಂದು ದಿನ ಎಲ್ಲರನ್ನೂ ಪರೀಕ್ಷೆಮಾಡಿ ಕನಕದಾಸನ ಹೆಚ್ಚುಗಾರಿಕೆಯನ್ನು ತೋರಿಸಿದ್ದು—

ಕು॥ ಅರುವಿುರದೆಡೆಯನ್ನು | ಸೇರಿ ತಿನೆ ಕದಲಿಯನು | ನಾರಿ ಪೇಳ್ದಿರೆ ಗುರುವು ಶಿಷ್ಯರೆಲ್ಲ ॥ ಬೇರೆಬೇರಾಗಿ ತಿನೆ | ಮಾರಮಣನೆಲ್ಲಿಯುಂ | ತೋರುತಿಹನೆನುತ ತಿರುಗಿದನು ಕನಕ ॥

ಆಗ ಪರಮಾತ್ಮನ ಸರ್ವವ್ಯಾಪಿತ್ವವನ್ನು ತಿಳಿದಿರುವ ಕನಕನನ್ನು ಕುರಿತು ಸ್ವಾಮಿಗಳು ತಮ್ಮ ಶಿಷ್ಯರಿಗೆ ಹೇಳಿದ್ದು—

ಶ್ಲೋ॥ ವಿಪ್ರಾದ್ದ್ವಿಷಡ್ಗುಣಯುತಾದರವಿಂದನಾಭ | ಪಾದಾರವಿಂದವಿಮುಖಾಚ್ಛ್ವಪಚಂ ವರಿಷ್ಠಮ್ ॥ ಮನ್ಯೇ ತದರ್ಪಿತಮನೋವಚನೇಹಿತಾರ್ಥಂ | ಪ್ರಾಣಂ ಪುನಾತಿ ಸಕುಲಂ ನ ತು ಭೂರಿಮಾನಃ ॥ —(ಸಂ. ಭಾಗ)

ಅ|| ಪರಮಾತ್ಮನ ಕಡೆಯು ಒಲವಿಲ್ಲದೆ ಹನ್ನೆರಡು ಗುಣಗಳಿರುವ ಬ್ರಾಹ್ಮಣರಿಗಿಂತಲೂ ಮನಸ್ಸನ್ನೂ ಮಾತನ್ನೂ ತನ್ನ ಹಿತಕ್ಕಾಗಿ ಪರಮಾತ್ಮನಲ್ಲಿಟ್ಟಿರುವ ಹೊಲೆಯನುತ್ತಮನೆಂದು ನನ್ನ ಅಭಿಪ್ರಾಯ. ಏಕೆಂದರೆ ಪ್ರಾಣವನ್ನೂ ಕುಲವನ್ನೂ ಪವಿತ್ರಗೊಳಿಸುವನು ಅವನೇ ಹೊರತು ಹೊರಗಣ ಮರ್ಯಾದೆಯುಳ್ಳವರಲ್ಲ.

ಹೀಗೆ ಜ್ಞಾನಸಿದ್ಧಿಯಾಗುವದಕ್ಕೆ ಗುರುವೇನೂ ಕಾರಣನಲ್ಲ. ಹೇಗೆಂದರೆ—

ಶ್ಲೋ|| ವಿತರತಿ ಗುರುಃ ಪ್ರಾಜ್ಞೇ ಯಥೈವ ತಥಾ ಜಡೇ; | ನ ತು ಖಲು ತಯೋರ್ಜ್ಞಾನೇ ಶಕ್ತಿಃ ಕರೋತ್ಯಪಹಂತಿ ವಾ; || ಭವತಿ ಹಿ ಪುನರ್ಭೂಯಾನ್ಭೇದಃ ಫಲಂ ಪ್ರತಿ; ತದ್ಯಥಾ | ಪ್ರಭವತಿ ಶುಚಿರ್ಬಿಂಬಗ್ರಾಹೇ ಮಣಿರ್ನ ಮೃದಾದಯಃ || —(ಉ. ರಾ. ಚ)

ಅ|| ಗುರು ಜಾಣನಿಗೆ ಹೇಗೊ ಹಾಗೆ ದಡ್ಡನಿಗೂ ಹೇಳಿಕೊಡುತ್ತಾನೆ. ಅವರಿಗೆ ತಿಳಿದುಕೊಳ್ಳುವ ಶಕ್ತಿಯನ್ನು ಉಂಟುಮಾಡುವದೂ ಇಲ್ಲ; ಕಳೆಯುವದೂ ಇಲ್ಲ. ಆದರೂ ಫಲದಲ್ಲಿ ಬಹಳಭೇದವಾಗುತ್ತದೆ. ಸ್ವಚ್ಛವಾದ ವಸ್ತು ಪ್ರತಿಬಿಂಬವನ್ನು ಹಿಡಿದುಕೊಳ್ಳುತ್ತದೆ. ಮಣ್ಣು ಮೊದಲಾದವುಗಳಿಗೆ ಆ ಸಾಮರ್ಥ್ಯವಿಲ್ಲ.

ಈರೀತಿಯಲ್ಲಿ ಗುರುಗಳ ಅನುಗ್ರಹವನ್ನು ಹೊಂದಿ ಕೃತಾರ್ಥನಾದ ಕನಕದಾಸನು ಭಕ್ತಿಪಂಥವನ್ನು ಬೆಳೆಸುವದಕ್ಕಾಗಿ ನಾಡಿನಲ್ಲೆಲ್ಲ ಸುತ್ತುವದಕ್ಕೆ ಹೊರಟು ಉಡುಪಿಗೆ ಹೋಗಿದ್ದಾಗ ನಡೆದ ಚಮತ್ಕಾರವೇನೆಂದರೆ—

ಕೀ|| ಉಡುಪಿಯ ಕೃಷ್ಣನ ಬಾಗಿಲ ಕಾಯ್ವರು | ತಡೆಯಲು ಹಿಂಗಂಡಿಯ ಕಡೆಗೆ || ನಡೆದು ನುತಿಸೆ ಕನಕನು ಕೃಷ್ಣನು ತಾ | ನೊಡನೆಯೆ ತಿರುಗಿದನಾ ಕಡೆಗೇ ||

ಆಗ ಕನಕದಾಸನು ಸ್ತೋತ್ರ ಮಾಡಿದ್ದು—

ಮುಖಾರಿ—ಏಕತಾಳ.

ತೊರೆದು ಜೀವಿಸಬಹುದೆ? ಹರಿ ನಿಮ್ಮ ಚರಣವನು | ಒರಿದೆ ಮಾತ್ಯಾಕಿನ್ನು ಅರಿತು ಪೇಳುವೆನಯ್ಯ || ಪ || ಕರ ಪಿಡಿದೆನ್ನನು ಕಾಯೊ ಕರುಣಾಸಿಧೆ || ಅ. ಪ || ತಾಯಿ ತಂದೆಯು ಬಿಟ್ಟು ತಪವ ಮಾಡಲುಬಹುದು; | ದಾಯಾದಿ ಬಂಧುಗಳ ಬಿಡಲುಬಹುದು; || ರಾಯ ಮುನಿದರೆ ರಾಜ್ಯವ ಬಿಡಲುಬಹುದು;| ಕಾಯಜಪಿತ, ನಿನ್ನಡಿಯು ಬಿಡಲಾಗದೊ || ೧ || ಒಡಲು ಹಸಿದರೆ ಅನ್ನವ ಬಿಡಬಹುದು; | ಪಡೆದ ಕ್ಷೇತ್ರವ ಬಿಟ್ಟು ಹೊರಡಬಹುದು; || ಮಡದಿಮಕ್ಕಳ ಕಡೆಗೆ ತೊಲಗಿ ಬಿಡಲು ಬಹುದು; | ಕಡಲೊಡೆಯ ನಿಮ್ಮಡಿಯ ಗಳಿಗೆ ಬಿಡಲಾಗದು || ೨ || ಪ್ರಾಣವ ಪರರಿಗೆ ಬೇಡಿದರೆ ಕೊಡಬಹುದು; | ಮಾನಾಭಿಮಾನವ ತಗ್ಗಿಸಬಹುದು; || ಪ್ರಾಣದಾಯಕನಾದ ಆದಿಕೇಶವರಾಯ, | ಜಾಣ ಶ್ರೀಕೃಷ್ಣ, ನಿನ್ನಡಿಯ ಬಿಡಲಾಗದು || ೩ || —(ದಾ)

ಆ ಕನಕನು ನಿಂತ ಕಂಡಿಯೇ "ಕನಕನ ಕಂಡಿ"ಯೆಂದು ಈಗಲೂ ಹೆಸರಾಗಿರುವದು. ಹೀಗೆಯೇ ಪ್ರಚಾರದಲ್ಲಿರುವ ಅವನ ಮಹಿಮೆಗಳೇನೆಂದರೆ—

ರ|| ವಿಷಾಸುಗಳನು ಹೂವಾಗಿ ಮಾಡಿದನು | ಹೀನಮದ್ಯವನು ಜೇನೆನಿಸಿದನು | ಮಳೆಯಿರದೆಡೆಯೊಳು ಮಳೆಯ ತರಿಸಿದನು | ಮಲೆತಾನೆಯ ಬೆಪ್ಪಾಗಿ ಮಾಡಿದನು | ಮಾರಿಯ ಮುಂದಣ ಕೊಲೆಯ ನಿಲಿಸಿದನು | ಶ್ರೀರಂಗದ ಬಾಗಿಲ ತೆಗೆಸಿದನು | ವಾದಿರಾಜರಿಚ್ಛೆಯನನುಸರಿಸಿ | ಶ್ರೀಧರನನು ತೋರಿಸಿದನು ಬರಿಸಿ | ಗುರುಗಳ ಮಾನಸಪೂಜೆಯ ಕಷ್ಟನ | ಸರಿತು ತಿಳುಹಿದನು ಸುಲಭೋಪಾಯವ | ಗಿಡದ ಮೇಲೆಯೇ ಇರೆ ತುಳಸಿಯ ದಳ | ಬಿಡದವ ಹರಿಗರ್ಪಿಸಿದ ಮಹಾಬಲ ||

ಇದರ ಮೇಲೆ ಅವನು ಮಾಡಿರುವ ಭಾಷಾಸೇವೆಯೇನೆಂದರೆ—

ಭಾ|| ರಾಮಧಾನ್ಯಚರಿತ್ರನನುಮಂ | ದ್ವಾಮನಹ ಮೋಹನತರಂಗಿಣಿ, | ಪ್ರೇಮಯುಕ್ತ ನೃಸಿಂಹಸ್ತವ ಹರಿಭಕ್ತಿಸಾರವನು || ರಾಮಣೀಯಕನಳಚರಿತ್ರೆಯ | ನಾಮಹಿಮನೆಮಗಾಗಿ ಬರೆದಿಹ | ಸೀಮಹಿಯೊಳಿರಲವನ ಕೀರ್ತಿಯ ಬಳ್ಳಿ ನೆಲೆಯಾಗಿ ||

ಅವನ ಮೋಹನತರಂಗಿಣಿಯ ವಿಷಯದಲ್ಲಿ ಅವನೇ ಮುದ್ದು ತೋರಿಸಿರುವದೆಂತೆಂದರೆ—

ಸಾಂ|| ಹರಿಶರಣರ ಪೆರ್ಚುಗೆ, ಬುಧಜನರಿಗೆ ಮೆಚ್ಚು, | ದುರಿತಾಟವಿಗೆ ಕಾಳ್ಗಿಚ್ಚು, || ವಿರಹಿಗಳಿಗೆ ಮುಚ್ಚು, ವೀರರ್ಗೆ ಪುಚ್ಚು, ಕೇ | ಳ್ವರಿಗದು ತನಿಬೆಲ್ಲದಚ್ಚು || —(ಮೋ. ತ)

ಟಿ|| ಮುಚ್ಚು—ಕುಡುಗೋಲು. ಪುಚ್ಚು—ಹುಚ್ಚು.

ಇಷ್ಟು ಪ್ರೌಢವಾಗಿ ಗ್ರಂಥವನ್ನು ಬರೆಯಬಲ್ಲವನಾಗಿದ್ದರೂ ಕುರುಬರನ್ನು ಸಂತೋಷಗೊಳಿಸುವದಕ್ಕಾಗಿ ಅವನು ಅವರ ಜೊತೆಯಲ್ಲಿ ಅವರಿಗೆ ತಕ್ಕಹಾಗೆ ಹಾಡಿರುವದೇನೆಂದರೆ—

ದೇಶಿ—ಭಾಷಾ.

ದೇವಿ ನಮ್ಮ ದೇವರು ಬಂದಾರು | ಬನ್ನೀರೆ ನೋಡ ಬನ್ನೀರೆ || ಪ || ಕೆಂಗಣ್ಣ ವಿನಾಸಗಾಗಿ ನಮ್ಮ ರಂಗ | ಗುಂಗಾಡಿ ಸೋಮನ ಕೊಂದಾನ್ ಮ್ಯಾ|| ಗುಂಗಾಡಿ ಸೋಮನ ಕೊಂದು ವೇದವ | ಬಂಗಾರದೊಡಲಿಂಗಿತ್ತಾನ್ ಮ್ಯಾ || ೧ || ದೊಡ್ಡ ಮಡುವಿನೊಳಗೆ ನಮ್ಮ ರಂಗ | ಗುಡ್ಡವ ಹೊತ್ತು ತಿರಿಗ್ಯಾನ್ ಮ್ಯಾ || ಗುಡ್ಡವ ಹೊತ್ತುಕೊಂಡು ತಿರುಗಿ ಸುರರನ್ನ | ದೊಡ್ಡವರನ್ನ ಮಾಡ್ಯಾನ್ ಮ್ಯಾ || ೨ || ಚೆನ್ನಕಾಡಿನ ಹಂದಿಯಾಗಿ ನಮ್ಮ ರಂಗ | ಚಿನ್ನದ ಕಣ್ಣಾನ ಕೊಂದಾನ್ ಮ್ಯಾ || ಚಿನ್ನದ ಕಣ್ಣಾನ ಕೊಂದು ಭೂವಿಯ | ಚೆನ್ನದ ಒಡಲಂಗಿತ್ತಾನ್ ಮ್ಯಾ || ೩ || ಸಿಟ್ಟಿಲಿ ಸಿಂಹನಾಗಿ ನಮ್ಮ ರಂಗ | ಹೊಟ್ಟೆಯ ಕರುಳು ಬಗೆದಾನ್ ಮ್ಯಾ || ಹೊಟ್ಟೆಯ ಕರುಳು ಬಗೆದು ನಮ್ಮ ರಂಗ | ಪುಟ್ಟಗೆ ವರಗಳ ಕೊಟ್ಟಾನ್ ಮ್ಯಾ || ೪ || ಹುಡುಗ ಹಾರವನಾಗಿ ನಮ್ಮ ರಂಗ | ಬೆಡ

ಗಿಲಿ ಮುಗಿಲಿಗೆ ಬೆಳೆದಾನ' ಮ್ಯಾ ॥ ಬೆಡಗಲಿ ಮುಗಿಲಿಗೆ ಬೆಳೆದು ಬಲಿಯನ್ನ । ಅಡಿಯಿಂದ ಪಾತಾಳಕೊತ್ತ್ಯಾನ್ಮ್ಯಾ ॥ ೫ ॥ ತಾಯಿಯ ಮಾತನು ಕೇಳಿ ನಮ್ಮ ರಂಗ । ಆವಿನ ಕಳ್ಳನ ಕೊಂದಾನ್ಮ್ಯಾ ॥ ಆವಿನ ಕಳ್ಳನ ಕೊಂದು ಭೂಮಿಯ । ಅವನೀಸುರರಿಗೆ ಇತ್ತ್ಯಾನ್ಮ್ಯಾ ॥ ೬ ॥ ಪಿಂಗಳ ಕಣ್ಣಿನ ಕೊಂಗಗಳಂ ಕೂಡಿ । ಜಂಘಿಲಿ ಲಂಕೆಗೆ ಪೋದಾನ್ಮ್ಯಾ ॥ ಜಂಘಿಲಿ ಲಂಕೆಗೆ ಪೋಗಿ ನಮ್ಮ ರಂಗ । ಹೆಂಗಸುಗಳ್ಳನ ಕೊಂದಾನ್ಮ್ಯಾ ॥ ೭ ॥ ಬಿಂಕದ ಗೊಲ್ಲನಾಗಿ ನಮ್ಮ ರಂಗ । ಟೊಂಕಾ ಮುರಿಕಿಯ ಕೂಡ್ಯಾನ್ಮ್ಯಾ ॥ ಟೊಂಕಾ ಮುರಿಕಿಯ ಕೂಡಿ ಮಾವನ। ಬಿಂಕವನೆಲ್ಲವ ಮುರಿದಾನ್ಮ್ಯಾ ॥ ೮ ॥ ಭಂಡನಂದದಿ ರಂಗ ಕುಂಡಿಯ ಬಿಟಗೊಂಡು । ಕಂಡ ಕಂಡಲ್ಲೆ ತಿರುಗ್ಯಾನ್' ಮ್ಯಾ ॥ ಕಂಡ ಕಂಡಲ್ಲೆ ತಿರುಗಿ ತ್ರಿಪುರದ । ಹೆಂಡಿರನೆಲ್ಲ ಕೆಡಿಸ್ಯಾನ್ಮ್ಯಾ ॥ ೯ ॥ ಚೆಲುವ ಹೆಂಡತಿ ಕುದುರೆಯ ಮಾಡಿ । ಒಳ್ಳೆ ರಾವುತನಾದಾನ್ಮ್ಯಾ ॥ ಒಳ್ಳೆ ರಾವುತನಾಗಿ ಮುಸಲರ । ಡೊಳ್ಳ ಹೊಟ್ಟೆಯ ಮೇಲೊದ್ಯಾನ' ಮ್ಯಾ ॥ ೧೦ ॥ ಡೋಳಿನ ಮೇಲ್ಕೈ ಭರಮಪ್ಪ ಹಾಕ್ಯಾನು । ತಾಳವ ಶಿವನಪ್ಪ ತಟ್ಟ್ಯಾನ' ಮ್ಯಾ ॥ ಒಳ್ಳೊಳ್ಳೆ ಪದಗಳು ಹನುಮಪ್ಪ ಹಾಡ್ಯಾನು । ಚೆಲುವ ಕನಕಪ್ಪ ಕುಣಿದಾನ್ಮ್ಯಾ ॥ ೧೧ ॥ —(ದಾ)

ಟಿ॥ ಸೋಮನ—ಸೋಮುಕನೆಂಬ ರಾಕ್ಷಸನನ್ನು. ಬಂಗಾರದೊಡಲಂಗೆ—ಹಿರಣ್ಯಗರ್ಭನಾದ ಬ್ರಹ್ಮನಿಗೆ. ಚಿನ್ನದ ಕಣ್ಣಿನ—ಹಿರಣ್ಯಾಕ್ಷನನ್ನು. ಪುಟ್ಟಗೆ—ಚಿಕ್ಕವನಾದ ಪ್ರಹ್ಲಾದನಿಗೆ. ಆವಿನ ಕಳ್ಳನ—ಗೋವನ್ನು ಕದ್ದ ಕಾರ್ತವೀರ್ಯಾರ್ಜುನನನ್ನು. ಕೊಂಗಗಳ—ಕೋತಿಗಳನ್ನು. ಹೆಂಗಸು ಗಳ್ಳನ—ರಾವಣನನ್ನು. ಟೊಂಕಾಮುರುಕಿಯ—ಕುಬ್ಜೆಯನ್ನು. ಮಾವನ—ಕಂಸನ. ಕುಂಡಿಯ ಬಿಟಗೊಂಡು—ಬೆತ್ತಲೆಯಾಗಿ.

ಕನಕನು ಸಾಮಾನ್ಯರಿಗೆ ಅರ್ಥವಾಗದಂಥ ಕೆಲವು ಹಾಡುಗಳನ್ನೂ ಮಾಡಿರುವನು. ಅವು ಗಳನ್ನು ಜನರು ಕನಕನ ಮುಂಡಿಗೆಗಳೆಂದೂ ಕವಡುಗಳೆಂದೂ ಗುಟ್ಟುಗಳೆಂದೂ ಕರೆಯುತ್ತಾರೆ.

ಇವನ ಉಪದೇಶದ ಮುಖ್ಯ ಸಾರಾಂಶವೇನೆಂದರೆ—

ರೇಗುಪ್ತಿ—ಅಟತಾಳ

ನಾರಾಯಣ ನಿನ್ನ ನಾಮಂಗಳಿರುತಿರೆ । ಬೇರೊಂದು ನಾಮವಿನ್ನೇಕಯ್ಯ? ॥ ಪ ॥ ಸೆಟ್ಟನೆ ದಾರಿಯು ಬಟ್ಟೆಯೊಳಿರುತಿರೆ । ಬೆಟ್ಟವ ಬಳಸುವದೇಕಯ್ಯ ॥ ಅಷ್ಟೈಶ್ವರ್ಯವು ಅಮೃತಾನ್ನವಿರುತಿರೆ । ಬಿಟ್ಟಿ ಕೂಳನೆ ತಿನಲೇಕಯ್ಯ? ॥ ೧ ॥ ಪರುಸದ ಪಾಳಂಗಳಿರುತಿರೆ ಬೀದಿಯ । ಜರಗನು ತೊಳೆಯಲಿನ್ನೇಕಯ್ಯ?॥ ಹರಿವಾಣದಲ್ಲಿ ಅಮೃತಾನ್ನವಿರುತಿರೆ । ತಿರುಪಗೂಳ ತಿನ್ನಲೇಕಯ್ಯ? ॥ ೨ ॥ ಬೆಲ್ಲವು ಕರದೊಳಗಿರುತಿರೆ ಕಾಡು । ಗಲ್ಲನು ಕಡಿಯಲಿನ್ನೇಕಯ್ಯ? ॥ ಬಲ್ಲಿದ ಬಾಡದಾದಿಕೇಶವನಿರುತಿರೆ । ಎಲ್ಲ ದೈವದ ಹಂಬಲೇಕಯ್ಯ? ॥ —(ದಾ)

ಹೀಗೆ ಭಕ್ತಿಯನ್ನು ಮಾಡಿದ ಕನಕದಾಸನು—

ಸಾ॥ ಕಡೆಗೆ ಕಾಗಿನೆಲೆಯಾದಿ ಕೇಶವನ । ಜಡಜಪಾದಯುಗದಲ್ಲಿ ॥ ಬಿಡದೈಕ್ಯತೆಯನು ಕನಕದಾಸನು । ಪಡೆದನು ತಾ ಸುಖದಲ್ಲಿ ॥

ಆದ್ದರಿಂದ ಕೀರ್ತನಾರಂಭದಲ್ಲಿ ಭಾಗವತಶಿರೋಮಣಿಗಳು "ಭಕ್ತಿಯನ್ನು ಹಿಡಿ ಈಗ" ಎಂದುಪದೇಶಮಾಡಿರುವರು.

---

# ತುಲಸೀದಾಸರು

## ಪೀಠಿಕೆ—ಸಾಧುವೃತ್ತಿ

ಬಿಲಹರಿ—ಝಂಪೆ

ಸಾಧುವೃತ್ತಿಯೊಳಗಿರುವುದನು ಬಯಸು ॥ ಪ ॥ ಭೂದೇವನಾಗಿ ನೀ ಧನ್ಯನೆಂದೆನಿಸೆ ॥ ಅ. ಪ ॥ ವೈರಾಗ್ಯವಿರಲದಕೆ ವಿದ್ಯವುಂ ಸೆರವಾಗಿ । ಭೂರಿಫಲವಹ ತಪಶ್ಚರ್ಯ ಸಾಗಿ ॥ ಕಾರುಣ್ಯಾಸಿಧಿಯಾದ ರಾಮನೊಲವನು ಪಡೆದು । ಧಾರಿಣಿಯ ಜನರನುದ್ಧಾರಗೈವಂಥ ॥ ೧ ॥

ಪ್ರಪಂಚದಲ್ಲಿ ಜನರು ಪರಲೋಕದ ವಿಚಾರವನ್ನೇ ಮನಸ್ಸಿಗೆ ಹಚ್ಚಿಕೊಳ್ಳದೆ ಇರುವುದನ್ನು ನೋಡಿ ದೊಡ್ಡವರು ಕನಿಕರವನ್ನು ತೋರಿಸಿ ಹೇಳಿರುವುದೇನೆಂದರೆ—

ಶ್ಲೋ॥ ಚಲಾ ವಿಭೂತಿ:, ಕ್ಷಣಭಂಗಯುವ್ವನಮ್, । ಕೃತಾಂತದಂತಾಂತರವರ್ತಿ ಜೀವಿತಮ್, ॥ ತದಪ್ಯವಿಜ್ಞಾ ಪರಲೋಕಸಾಧನೇ । ನೃಣಾಮಹೋ ! ವಿಸ್ಮಯಕಾರಿ ಚೇಷ್ಟಿತಮ್ ॥ —(ಸು)

ಅ॥ ಐಶ್ವರ್ಯವು ಚಂಚಲವಾದದ್ದು. ಪ್ರಾಯವು ಕ್ಷಣಕ್ಷಣಕ್ಕೆ ಬದಲಾಗತಕ್ಕದ್ದು. ಜೀವವು ಯಮನ ದವಡೆಯೊಳಗೆ ಸಿಕ್ಕಿರುವಂಥದ್ದು. ಆದರೂ ಪರಲೋಕದ ಯೋಗಕ್ಷೇಮವನ್ನು ನೋಡಿಕೊಳ್ಳುವ ವಿಷಯದಲ್ಲಿ ಉದಾಸೀನರಾಗಿರುವ ಜನರ ನಡೆವಳಿಕೆಯು ಆಶ್ಚರ್ಯವನ್ನುಂಟುಮಾಡುತ್ತಿದೆ.

ಅದರಲ್ಲಿಯೂ ಮನಸ್ಸನ್ನು ಹೆಚ್ಚು ಹೆಚ್ಚು ಮೋಹಗೊಳಿಸುವ ಸ್ತ್ರೀಪುರುಷಸಂಬಂಧವಾದ ವಿಷಯೇಚ್ಛೆಯನ್ನು ಬಯಸಬೇಡವೆಂದು ಎಚ್ಚರಗೊಟ್ಟು ಪುರುಷನನ್ನು ಕುರಿತು ಹೇಳುವಾಗ ಜ್ಞಾನಿಗಳು ಹೇಳಿರುವುದೇನೆಂದರೆ—

ಶ್ಲೋ॥ ನಾರೀಸ್ತನಭರನಾಭೀದೇಶಮ್ । ದೃಷ್ಟ್ವಾ ಮಾ ಗಾ ಮೋಹಾವೇಶಮ್ ॥ ಏತನ್ಮಾಂಸವಸಾದಿವಿಕಾರಮ್ । ಮನಸಿ ವಿಚಿಂತಯ ವಾರಂವಾರಮ್ ॥ —(ಮೋ. ಮು)

ಅ॥ ಸ್ತ್ರೀಯರ ಸ್ತನದ ಹೊರೆಯಿಂದ ಕೂಡಿದ ನಾಭೀದೇಶವನ್ನು ನೋಡಿ ಮರುಳಾಗಬೇಡ. ಇದು ಮಾಂಸ, ವಸೆ—ಇವುಗಳ ವಿಕಾರವೆಂದು ಮನಸ್ಸಿನಲ್ಲಿ ಮತ್ತೆಮತ್ತೆ ವಿಚಾರಮಾಡು.

ಸ್ತ್ರೀ ಮೊದಲಾದವರು ಪ್ರಯೋಜನಕಾರಿಗಳಲ್ಲವೆಂದು ಒಬ್ಬ ಸಾಧುಗಳು ಹೇಳಿರುವದೇನೆಂದರೆ—

—ಝಂಪೆ—

ವೃ|| ಸತಿಸುತರು ಹಣಕಾಸುಗಳ ಬಾಳು ನಿಲ್ಲುವವು—ವ್ಯಥೆಯಿಂದ ಬಾಗಿಲೊಳಗೇ ; | ಹಿತರು ಬಂಧುಗಳು ಹಿಂಬಾಲಿಸುವರಾಗವಸ—ಪಥವ ಸುಡುಗಾಡವರೆಗೇ ; || ಗತಿ ಮುಂದಕೇನೆನಲ್ಕೆಳ್ಳಷ್ಟು ಹಿಂದೆಗ್ಗೈ | ದತಿಶಯುದ ತಪವಿರಲದೇ | ಜೊತೆಗೊಳಿಪುದವಗೆ ಹಿತವಪ್ಪ ಪರಲೋಕವನು—ಕ್ಷಿತಿಯೊಳಿದು ಸತ್ಯ ಜನರೇ || —(ಹ. ಹಂ)

ಈ ಅಭಿಪ್ರಾಯಗಳನ್ನೆಲ್ಲ ಸಂಗ್ರಹಿಸಿ ಒಬ್ಬ ದಾಸರು ಹಾಡಿರುವದೇನೆಂದರೆ—

ಭೈರವಿ—ರೂಪಕ

ನಾನು ನೀನು ಎನ್ನದಿರು ಹೀನಮಾನವ || ಪ || ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೋ ಪ್ರಾಣಿ || ಅ. ಪ || ಹೆಣ್ಣು ಹೊನ್ನು ಮಣ್ಣು ಮೂರು ನಿನ್ನದೇನೆಲೋ ? | ಅನ್ನದಿಂದ ಬಂದ ಕಾಮ ನಿನ್ನದೇನೆಲೋ ? || ಕರ್ಣದಿಂದ ಬರುವ ಘೋಷ ನಿನ್ನದೇನೆಲೋ ? | ನಿನ್ನ ಬಿಟ್ಟು ಹೋಹ ದೇಹ ನಿನ್ನದೇನೆಲೋ ? || ೧ || ಹಲವು ಜನ್ಮದಲ್ಲಿ ಬಂದಿರುವನು ನೀನೆಲೋ ; | ಮಲದ ಗರ್ಭದಲ್ಲಿ ಬಂದಿರುವನು ನೀನೆಲೋ ; || ಜಲದ ದಾರಿಯಲ್ಲಿ ಬಂದಿರುವನು ನೀನೆಲೋ ; | ಕುಲವು ಜಾತಿ ಗೋತ್ರಗಳುಳ್ಳವನು ನೀನೆಲೋ || ೨ || ಕಾಲಕರ್ಮ ಶೀಲನೇಮ ನಿನ್ನದೇನೆಲೋ ? | ಜಾಲವಿದ್ಯೆ ಬಯಲ ಮಾಯ ನಿನ್ನದೇನೆಲೋ ? || ಕೀಲು ಜಡಿದ ಸರದ ಗೊಂಬೆ ನಿನ್ನದೇನೆಲೋ ? | ಲೋಲ ಆದಿಕೇಶವನ ಭಕ್ತನಾಗೆಲೋ || ೩ ||—(ದಾ)

ಆ ಭಕ್ತಿಯನ್ನು ಮಾಡುವ ವಿಷಯದಲ್ಲಿ ತಡವನ್ನು ಮಾಡಬಾರದೇಕೆಂದರೆ—

ಶ್ಲೋ|| ಆಯುಃ ಕ್ಷಣಲವಮಾತ್ರಮ್ | ನ ಲಭ್ಯತೇ ಹೇಮಕೋಟಿಭಿಃ ಕ್ವಾಪಿ || ತಚ್ಚೇದ್ಗಚ್ಛತಿ ಸರ್ವಮ್ | ಮೃಷಾ ತತಃ ಕಾಧಿಕಾ ಹಾನಿಃ?||—(ಸು)

ಅ|| ಕೋಟಿಧನವನ್ನು ಕೊಟ್ಟರೂ ಎಲ್ಲಿಯೂ ಒಂದಿಷ್ಟು ಆಯುಸ್ಸು ಸಿಕ್ಕುವದಿಲ್ಲ. ಅದು ಹೋಯಿತೆಂದರೆ ಎಲ್ಲವೂ ಸುಳ್ಳೆ. ಅದಕ್ಕಿಂತ ಹೆಚ್ಚಿನ ಹಾನಿ ಯಾವದು ?

ಇದೇ ಅಭಿಪ್ರಾಯವನ್ನು ಮತ್ತೊಬ್ಬರು ಹೇಳಿರುವದೇನೆಂದರೆ—

ವೃ|| ಒಡಲ ತೊಡರ್ವ ತುಟ್ಟಿಸದ ಮುನ್ನ, ನಿಜೇಂದ್ರಿಯವರ್ಗದೇಳ್ಗೆಯೊ | ಗುರ್ಡಿಸದ ಮುನ್ನ, ಮುಪ್ಪು ಮುರಿದೊತ್ತದ ಮುನ್ನ, ಲಲಾಟದಕ್ಷರಂ || ತೊಡೆಯದ ಮುನ್ನ, ನಿಮ್ಮ ಪದಮಂ ನೆರೆ ಪೂಜಿಸವೇಳ್ಕುಮ್ಮೃದೆ ನೀ | ರಡಸೆ ಬಳಿಕ್ಕೆ ಬಾವಿಯಸಗುಳ್ದಪರೇ ? ಗುರುಮೂರ್ತಿಶಂಕರಾ||—(ಗು. ಶಂ. ಶ)

ಭಕ್ತಿಯನ್ನು ಮಾಡುವ ಕಾಲದ ನಡೆವಳಿಕೆಗಳನ್ನು ಕುರಿತು ಇನ್ನೊಬ್ಬರು ಹೇಳಿರುವದೇನೆಂದರೆ—

ವೃ|| ನೋವಂ ಮಾಡದಿರಾರ್ಗಮೊಳ್ಪನೊಳಕೊಳ್; ಮೆಳ್ಪಟ್ಟೊಡೇಂ ನಿನ್ನನಾರ್ | ಕಾವರ್ ?; ನೀಂ ಜವನೆಂಬ ರಕ್ಕಸನ ಪೆರ್ವಾಯೊಳ್ ಮುಹೋಗಾ

ಗ್ರದೊಳ್ ‖ ಸಾವರ್ ಪುಟ್ಟುವರೆಂಬ ದಾಡೆಯೆಡೆಯೊಳ್ ಸಿಕ್ಕಿರ್ಪರಿಯಿಂತಿರ್ದು ವೇಂ । ಜೀವಾ, ನೆಟ್ಟನೆ ಮೆಲ್ಲದನ್ನೆವರೆಗಂ ಬೇಗಂ ನೆಗಳ್ ಧರ್ಮದೊಳ್ ‖

—(ಜೀ. ಸಂ)

ಟಿ|| ಒಳ್ಪಂ+ಒಳಕೊಳ್–ಒಳ್ಳೆಂಯತನವನ್ನು ಹೊಂದು. ಮೆಳ್ಪಟ್ಟೊಡೆ–ಮರುಳನಾದರೆ. ಜವನೆಂಬ–ಯಮನೆಂಬ. ಮೆಲ್ಲದನ್ನೆವರೆಗಂ–(ಯಮನು ನಿನ್ನನ್ನು) ತಿನ್ನುವದರೊಳಗೇ.

ಹೀಗೆ ಒಳ್ಳೆ ನಡೆವಳಿಕೆಗಳನ್ನು ಮೈಗೂಡಿಸಿಕೊಂಡು ಗುರುಗಳಿಗೆ ಶರಣುಹೋಗಬೇಕಾದುದೆಂತೆಂದರೆ—

ಭಾ॥ ನೋಡಿ ನಿಮ್ಮನು, ಪದಕೆ ಮಂಡೆಯು । ನೀಡಿ ವಂದಿಸಿ, ಕೂಡೆ ಪೂಜೆಯು । ಮಾಡಿ, ಪಂಗೆ ಕೊಂಡಾಡಿ, ನಲಿನಲಿದಾಡಿ, ಬಕುತಿಯೊಳು ‖ ಮೂಡಿ ಮುಳುಗುವ ಪುಣ್ಯವನೆ ಕೃಪೆ । ಮಾಡಿ, ಕರುಣದಿ ನೋಡಿ, ಸುಖದೊಳು । ಕೂಡಿ ಪರಮಾರೂಢ ಮಾಪಾಲಿಪುದೆಮ್ಮ ನಟವೀಶ ‖ —(ಗು. ಭ. ಸಾ)

ಅವರು ಅನುಗ್ರಹಬುದ್ಧಿಯಿಂದ ಹೇಳುವದೇನೆಂದರೆ—

ಕಮಾಚು–ತ್ರಿಪುಟ

ನಿಶಿದಿನವು ಭಜಿಸಿರೊ । ಶ್ರೀರಾಮನಾಮವ ‖ ಪ || ಸಾಧುಜನಾವನ । ಮೋದದಾಯಕನ । ವೇದಾಂತವೇದ್ಯನ । ನಿಶಿದಿನವು ‖ ೧ || ಭಕ್ತಮಂದಾರನ | ಮುಕ್ತಿಪಧಾತನ । ಮತ್ಕುಲದೇವನ । ನಿಶಿದಿನವು || ೨ ‖ ದಶರಥಬಾಲನ | ದಶಶಿರಕಾಲನ । ವಸುಮತೀನಾಥನ । ನಿಶಿದಿನವು ‖ ೩ ‖ ಕಮಲದಳಾಕ್ಷನ | ಸುಮಶರರೂಪನ । ವಿಮಲಚರಿತ್ರನ । ನಿಶಿದಿನವು ‖ ೪ || ನರಸಿಂಹದಾಸನ | ಪೊರೆವ ಸುವೀರನ | ಪರಮಪಾವನನ ನಿಶಿದಿನವು ‖ ೫ ‖ —(ದಾ)

ಈ ಅರ್ಥಗಳೆಲ್ಲ ಒಳಗೊಂಡಿರುವಂತೆ ಭಾಗವತೋತ್ತಮರು ಕೀರ್ತನಾರಂಭದಲ್ಲಿ "ಸಾಧುವೃತ್ತಿಯೊಳಗಿರುವದನು ಬಯಸು" ಎಂದು ಮುಂತಾಗಿ ಉಪದೇಶಮಾಡಿರುವರು. ಇದಕ್ಕೆ ನಿದರ್ಶನವಾಗಿ ತುಲಸೀದಾಸರ ಆಖ್ಯಾನವು ನಿರೂಪಣಮಾಡಲಾಗುವದು.

---

## ಆಖ್ಯಾನ

ಕೀ॥ ಅತ್ಮಾರಾಮದ್ವಿವೇದಿಹುಲಸಿಯರ | ಆತ್ಮನಾಗಿ ರಾಜಾಪುರದಿ ‖ ಆತ್ಮರೂಪಸುತನಾದನೆಲ್ಲ ಜೀ । ವಾತ್ಮರನುದ್ಧರಿಸಲು ಜವದಿ ‖

ಆ ಮಗು ಬೇರೆ ಬೆಳೆಯುಬೇಕಾದ ಪ್ರಸಂಗ ಬಂದದ್ದೆಂತೆಂದರೆ—

ಸಾ॥ ಹೆಸರಿಟ್ಟು ತುಲಾರಾಮನೆನ್ನುತಲಿ । ನೃಸಿಂಹದಾಸರಿಗೊಡನೆ ‖ ವಶಗೈದನು ಮೂಲದಾದಿಪಾದದಿ | ಬಸಿರಿಂ ಬಂತೆಂದದನೆ ||

ಸಾಕುತಂದೆಯು ಬಳಿಯಲ್ಲಿ ಆ ಮಗುವಿನಲ್ಲಿ ಕಾಣಬಂದ ಮೊದಲನೆ ವಿಶೇಷ—

ದಿಂ|| ಪ್ರೇಮದಿಂದಾ ಕೂಸಲ್ಲಿ ತಾನು ಮುಂಚೆ | ರಾಮ ರಾಮಾ ಎಂದೆ ನೆಲ ಬೆರಗು ಪಿಂಚೆ || 'ರಾಮ ಬೋಲಾ' ಬಾ ಎಂದು ಕರೆದರಾಗ | ಪ್ರೇಮ ದಿಂದೆಲ್ಲಾ ಜನರು ಕೂಡಿ ಬೇಗ ||

ಆ ನೃಸಿಂಹದಾಸರು ಶ್ರೀರಾಮಾನುಜಾಚಾರ್ಯರ ಪಂಥದವರಾಗಿದ್ದು ಆ ಕೂಸನ್ನು ಆದರ ದಿಂದ ಸಾಕಿ ಚೆನ್ನಾಗಿ ವಿದ್ಯೆಯನ್ನು ಕಲಿಸಿ ತಮ್ಮೊಡನೆ ಚಿಕ್ಕಂದಿನಲ್ಲಿಯೇ ಬೇಕಾದಷ್ಟು ದೇಶ ಸಂಚಾರವನ್ನು ಮಾಡಿಸಿದರು.

ವಿದ್ಯಾವಿಶೇಷದಿಂದ ಆಗುವ ಹೆಚ್ಚಿನ ಪ್ರಯೋಜನವನ್ನು ಕುರಿತು ನೀತಿಶಾಸ್ತ್ರಕಾರರು ಹೇಳಿ ರುವದೇನೆಂದರೆ —

ಶ್ಲೋ||ಅನೇಕಸಂಶಯೋಚ್ಛೇದಿ ಪರೋಕ್ಷಾರ್ಥಸ್ಯ ದರ್ಶಕಮ್ | ಸರ್ವಸ್ಯ ಲೋಚನಂ ಶಾಸ್ತ್ರಂ ಯಸ್ಯ ನಾಸ್ತ್ಯಂಧ ಏವ ಸಃ || —(ಸು)

ಅ|| ಅನೇಕಸಂಶಯಗಳನ್ನು ಕಳೆದು ಪರೋಕ್ಷವಾದ ಅರ್ಥವನ್ನು ತೋರಿಸುತ್ತ ಎಲ್ಲರಿಗೂ ಕಣ್ಣಿನಂತಿರುವ ಶಾಸ್ತ್ರವು ಯಾರಿಗಿಲ್ಲವೊ ಅವನು ಕುರುಡನೇ ಸರಿ.

ಅದರ ಜೊತೆಗೆ ದೇಶಸಂಚಾರವೂ ಸಹಾಯವಾಗುವದೆಂತೆಂದರೆ—

ಶ್ಲೋ|| ಯೋ ನ ಸಂಚರತೇ ದೇಶಾನ್ಯೋ ನ ಸೇವೇತ ಪಂಡಿತಾನ್ | ತಸ್ಯ ಸಂಕುಚಿತಾ ಬುದ್ಧಿರ್ಘೃತಬಿಂದುರಿವಾಂಭಸಿ || —(ಸು)

ಅ|| ಯಾವನು ದೇಶಸಂಚಾರವನ್ನು ಮಾಡುವುದಿಲ್ಲವೊ ಯಾವನು ಪಂಡಿತರನ್ನು ಸೇವಿಸುವ ದಿಲ್ಲವೊ ಅವನ ಬುದ್ಧಿಯು ನೀರಿನಲ್ಲಿ ಬಿದ್ದ ತುಪ್ಪದಂತೆ ಹೆಪ್ಪುಗೊಂಡಿರುವದು.

ಹೀಗೆ ಬೆಳೆದ ತುಲಾರಾಮನು ತಾನು ಮೂರನೆಯ ಸಲ ಮದುವೆಯಾದ ಮಮತಾದೇವಿ ಯೊಡನೆ ಅತ್ಯಂತಾಸಕ್ತನಾಗಿರುತ್ತ ಒಮ್ಮೆ ಆಕೆ ತಾನಿಲ್ಲದಾಗ ಹತ್ತಿರದ ತೌರುಮನೆಗೆ ಹೋಗಿದ್ದ ದ್ದನ್ನು ಮನೆಗೆ ಬಂದು ನೋಡುತ್ತಲೇ ವ್ಯಥೆಗೊಂಡದ್ದು—

ಆನಂದಭೈರವಿ—ರೂಪಕ

ಕಾಂತೆಯಿಲ್ಲದ ಮನೆಯಿದೇತಕೆ? || ಪ || ಸಂತಾಪಕಾರಿ || ಅ. ಪ || ಶಶಿಯಿಲ್ಲದ ಕರಿವೋಡದ | ಸಿಶಿಯಂದದೊಳಾಗಿರುವದು || ಶಶಿಮುಖಿ ತಾನಿಲ್ಲ ದಿರಲು | ಮಸಿನಣ್ಣಾದಿ ಪನೆ ತಾನಿದು || ೧ || ಜಲಜೋದ್ಭವಸುಮಗಂಧದ | ಸುಳಿವಿಲ್ಲದ ಸರಸಿಯಂತೆ || ಲಲನೆಯು ತಾ ಸುಳಿದಾಡದ | ನಿಲಯವು ಸಲೆ ಶೂನ್ಯವಾಹ! || ೨ || ಜೀವಕಲೆಗಳುಳಿದ ದೇಹದ| ಭಾವವನ್ನು ಹೋಲುತಿಹು ದು || ಭಾವೆಯಿಲ್ಲದಿಹುದರಿಂದ | ಭಾವಿಸಲೀ ಸ್ಥಿತಿಯ ಚಂದ || ೩ ||

ಹೀಗೆಂದು ಅವನು ಮನೆಯನ್ನು ಬಿಟ್ಟು ದಾರಿಯಲ್ಲಿ ತುಂಬಿ ಹರಿಯುತ್ತಿದ್ದ ನದಿಯ ಬಳಿಗೆ ಬಂದು ಹೆಂಡತಿಯ ಮೇಲಿನ ಆಸಕ್ತಿಯ ಆವೇಶದ ಭರದಲ್ಲಿ—

ಸಾಂ|| ತೇಲುವ ಹೆಣದ ದೋಣಿಯೊಳಾಚೆಗೈದುತ | ಜೋಲುವ ಹಾವ ನು ಹಿಡಿದು || ಮೇಲಿನ ಮನೆಗೈದಿ ಸತಿಯನೆಬ್ಬಿಸಿದನು | ಲಾಲಿಸಿ ಮೆಲುವಾತ ನುಡಿದು ||

ಆಳೆ ಎದ್ದು ನಡೆದ ಸಂಗತಿಯನ್ನೆಲ್ಲ ತಿಳಿದು ಬೆದರಿ ಹೇಳಿದ್ದು—

ಕಂ|| ಇಷ್ಟು ವಿಶ್ವಾಸದಿಂ | ನಿಷ್ಠೆಯಿಟ್ಟರೆ ದೈವ | ವೆಷ್ಟು ಫಲಕಾರಿಯೋ! ತಿಳಿಯಲರಿದು; || ಕಷ್ಟಬಟ್ಟರ ಬರಿದೆ; | ಇಷ್ಟು ಪ್ರೇಮವನೆನ್ನೊಳಿಟ್ಟುದಕೆ ಬಹುಫಲವು ನೋಡೆ ಕಿರಿದು ||

ಎನ್ನುತ್ತಲಿ ಅವನಲ್ಲಿ ಏನೋ ಒಂದು ವಿಲಕ್ಷಣವಾದ ಮಾರ್ಪಾಡಾದಂತೆ ಕಾಣಬಂತು.

ಶ|| ಹಿಂದಿನ ರೀತಿಯು | ಚಂದದಿ ನೆನಪಿಗೆ | ತಂದುಕೊಂಡ ಪರಿಯನು ತೋರಿ || ಸಂದೆಗವಿಲ್ಲದೆ | ನಿಂದಲ್ಲಿಯೆ ತಾ | ನಂದು ಭಕ್ತನಾದನು ವಾರಿ ||

ಒಡನೆ ಅವನು ಮನಸ್ಸಿಗೆ ಉಪದೇಶ ಮಾಡಿದ್ದು—

ಸೀ|| ಪರಿಪರಿಯೊಳಗೆ ಪ್ರೇಮಭರದ ತೋರ್ಪುದರಿಂದ-ಪರಿಶೋಭಿಸುತ್ತಿರ್ಪುದವನ ಸೊಬಗು; | ಸ್ಫುರಿಸುತ್ತಲಿರುವವನ ಚರಣಕಾಂತಿಯ ಮುಂದೆ-ಪರಿಪೂರ್ಣಶಶಿ ತಾನು ನಾಚುತಿಹನು; | ಮುರುಗುತಿಹ ಕಾಲಾಂಬುಧರಸದೃಶನಾದವನ-ಶರೀರದಿಂ ಮಿಂಚು ಮಿಂಚುತ್ತಲಿಹುದು; | ಸ್ಮರಿಸುತವನಂದವನು ನರರು ರೋಮಾಂಚವನು-ಧರಿಸುತೆ ಸುಖಾಶ್ರುವನು ಸುರಿಸುತಿಹರು; || ಶರಣಜನ ದುರಿತೌಘವಿಪಿನದಾವ | ಕರುಣದಿಂದಲಿ ಭಕ್ತಿಭಿಕ್ಷೆಯೀವ; | ನೆರಗೊಡ್ಡಿ ಬೇಡಿಕೋ ಮನವೆ, ಈಗ | ಹರಿಚರಣದಲಿ ಹಣೆಯನಿಟ್ಟು ಬೇಗ || —(ಕ. ಸಂ)

ಹೀಗೆಂದು ಶರಣುಹೋದದ್ದು—

ವೃ|| ಮುನ್ನಮನೇಕರಂ ಭವದಿನೆತ್ತಿ ಯಶೋನಿಧಿಯಾದೊಡೇಂ? ಕರಂ | ನಿನ್ನ ದಯಾಗುಣಕ್ಕದು ವಿಶೇಷವೆ? ಮೂರ್ಖನನಾಥನನೆನ್ನ ರೌದ್ರನಂ || ನನ್ನ ಪವಿತ್ರಮಾಡಿದೊಡೆ ದೊಡ್ಡವೆನರ್ಘನಕೀರ್ತಿ; ದೇವ, ಬೂ | ತೆನ್ನದಿರೊಪ್ಪುಗೊಳ್ಳಗದಿರ್ಕೈ ಶರಣಾಗಪರಾಜಿತೇಶ್ವರಾ || —(ಅ. ಶ)

ಟಿ|| ಬೂತು—ಬುರುಡೆಯ ಮಾತು. ಒಪ್ಪುಗೊಳ್—ಒಪ್ಪಿಕೊ.

ಈ ಪ್ರಸಂಗವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಶ್ಲೋ|| ಲೋಕೋಽಯಂ ಕಿಲ ಮೋಹಿತೋ ಮಮತಯಾ ಕಾಃ ಕಾ ನ ನಾಮಾಚರೇತ್? | ಪ್ರೇತಾಸಂಗಮಹಾಭುಜಂಗಮಪರಿಷ್ವಂಗಾದಿಘೋರಕ್ರಿಯಾಃ || ತಾಂ ಜಹ್ಯಾದ್ಯದಿ ರಾಮದರ್ಶನಸುಧಾಲಾಭಸ್ಯ ಸದ್ಭಾಜನಃ | ಸ್ಯಾದಿತ್ಯತ್ರ ನಿದರ್ಶನಾಯ ತುಲಸೀದಾಸಃ ಸಮುಜ್ಜೃಂಭತೇ || —(ಸು. ಲಾ)

ಅ|| ಈ ಲೋಕದ ಜನರು ಮಮತೆಯಿಂದ ಮೋಹಿತರಾಗಿ ಏನೇನು ಮಾಡಲಾರರು? ಹೆಣವನ್ನು ತಬ್ಬಿಕೊಳ್ಳುವದು, ದೊಡ್ಡ ಹಾವನ್ನು ಕೈಯಲ್ಲಿ ಹಿಡಿಯುವದು—ಈ ಮೊದಲಾದ ಭಯಂಕರವಾದ ಕೆಲಸಗಳನ್ನು ಮಾಡುತ್ತಾರೆ. ಆದರೆ ಮಮತೆಯನ್ನು ಬಿಟ್ಟರೆ ರಾಮದರ್ಶನವೆಂಬ ಅಮೃತದ ಲಾಭಕ್ಕೆ ಮನುಷ್ಯನು ಪಾತ್ರನಾಗುವನೆಂಬುದಕ್ಕೆ ತುಲಸೀದಾಸನೇ ಉದಾಹರಣೆ.

ಆಮೇಲೆ ತುಲಾರಾಮನು ನಾಮಸ್ಮರಣೆಯನ್ನು ಮಾಡುತ್ತ ಕಾಶಿಗೆ ಹೋಗಿ ಅಲ್ಲಿ ಹನ್ನೆರಡುವರ್ಷ ಸತ್ಪುರುಷರ ಸಮುದಾಯದಲ್ಲಿದ್ದು ಬೇಕಾದಷ್ಟು ತಪಶ್ಚರ್ಯೆಯನ್ನು ಮಾಡಿರುವಾಗ ಕೊನೆಯಲ್ಲೊಂದು ದಿನ—

ಕೀ॥ ಪ್ರತಿದಿನ ಶೌಚವಿಧಿಯ ಶೇಷಾಂಬುವ । ಸತತವೊಂದು ಮರ ಕೆಳೆಯುತಿರೆ ॥ ಹಿತದಿಂ ಕುಡಿಯುತ ಭೂತವೊಂದು ಸು । ಸ್ಥಿತಿಗೊಂಡೆಂದಿತು ದಯ ವಿಚಾರಿ ॥

ಏನೆಂದಿತೆಂದರೆ—

ಸಾ॥ ಗಂಗೆಯ ನೀರನು ಮುಟ್ಟಲಾರದೆ । ಭಂಗವ ಪಡುತಿರ್ದೆನಗೆ ॥ ಇಂಗಿಸಿದ್ದೈ ದಾಹವ; ಬೇಡಿಷ್ಟವ; । ಹಿಂಗದೆ ಕೊಡುವೆನು ನಿನಗೆ ॥

ರಾಮನನ್ನು ನಿರೀಕ್ಷಿಸುತ್ತಿದ್ದ ತನಗೆ ಭೂತದರ್ಶನವಾದದ್ದನ್ನು ನೆನೆದು ತುಲಸೀದಾಸನು ಮನಸ್ಸಿನಲ್ಲಿ ಯೋಚಿಸಿದ್ದು—

ಚೌ॥ ನೋಡಲಿರೆ ರಾಮನನು ಕಣ್ಣಿಗೆ-ನೋಡೆ ದೊರೆತುದು ಭೂತವು ; । ನಾಡೆ ಬಯಸಲು ಸಂದಿಸಿಯು ತಾ-ನೀಡೆ ಬಂದಿತು ಹಂದಿಯು ;॥ ಪ್ರೌಢಹಂಸವ ಕರೆಯೆ ನಿಂತಿತು ಪೋಡಿಯಾಗಿಹ ಕಾಗೆಯು; । ನಾಡೆ ಕಲ್ಪದ್ರುಮವನೀಡಲ-ಕಾಡು ತಾ ಬಂದಿಳಿದುದು ॥

ಆದರೂ ಅದರ ಸಹಾಯವನ್ನಪೇಕ್ಷಿಸಬಾರದೆಂದು ಯೋಚಿಸುತ್ತಾನೆ—

ದಿಂ॥ ಸಣ್ಣನಾರುಂ ಹಾರವನು ಗೈವುದಲ್ತೆ? । ಸಣ್ಣದಾಗಿರ್ದುಂ ಸೂಜಿ ಹೊಲಿವುದಲ್ತೆ? ॥ ಎನ್ನಲೇನೀಚಲ್ ಪರಕೆಗಪ್ಪುದಲ್ತೆ? ॥ ಇನ್ನು ಭೂತವ ಕೈ ಬಿಡಲಯುಕ್ತಮಲ್ತೆ? ॥

ತುಲಸೀದಾಸನು ತಾನು ರಾಮನನ್ನು ನೋಡಬೇಕೆನ್ನಲು ಅದು ಹೇಳಿದ್ದು—

ಸಾಂ॥ ಅವನ ನೆನಪುಕೊಡ ಸಲ್ಲದೆನಗೆ ಪೇಳ್ವೆ । ಪವನ ದೂತನ ನೆಲೆಯನ್ನು ;॥ ಜವದಿ ಒಂದಾವೇಲೆ ಪೋಪನು ಕೀರ್ತನ । ಕವನ ಪಾದವ ಹಿಡಿ ನೀನು ॥

ತುಲಸೀದಾಸನು ಅದೇ ಪ್ರಕಾರ ಕೀರ್ತನದಲ್ಲಿ ಮೊದಲು ಬಂದು ಕೊನೆಗೆ ಹೋಗುವವನನ್ನು ನೋಡಿಕೊಂಡಿದ್ದು ಅವನನ್ನು ಹಿಂಬಾಲಿಸಿ ಹೋಗಿ ಹೇಳಿದ್ದು—

ತೋಡಿ—ಆದಿತಾಳ

ವಂದಿಪೆ ಮನದಲಿ । ಇಂದು ನಾ ದೈನ್ಯದಿ; । ಪಾಲಿಸು ಜೀಯ । ಅಂಜನೇಯ ॥ ಪ ॥ ಶ್ರೀರಾಮಚಂದ್ರಗೆ ಪ್ರಿಯನು ನೀನಲ್ಲವೆ? । ಕಾರುಣ್ಯದಿಂದಲಿ ಪಾರುಮಾಡೆನ್ನ ॥ ಅ. ಪ ॥ ಚಿನ್ನದಂತೆ ಹೊಳೆಹೊಳೆಯುತಿರುವ ದೇಹ । ವನ್ನು ಪಡೆದು ಧೀರಾಗ್ರೇಸರನಾಗಿರುತ ॥ ಇನ್ನು ಶರಣುಬಂದ ಜನಗಳ ಸರ್ವಭಯ । ವನ್ನು ಕಳೆಯುವಂಥ ಮಾರುತಿರಾಯ ॥ ೧ ॥ ಸುರಪನ ವಜ್ರವ ತೃಣದಂತೆ ಕಡೆಗಂಡು । ಹರಿದಶ್ವನಂದದಿ ಮೆರುಮೆರುಗುತ್ತಲಿ ॥ ಸುರಕಾರ್ಯಕಾಗಿಯೆ ತನುವನೆತ್ತಿರುವಂತೆ । ಮೆರೆಯುತಲಿರುವಂಥ ರಾಮದೂತನೆ ॥ ೨ ॥ ಸಂಗೀತವಿದ್ಯೆಯ ಸಾಂಗವಾಗಿಯೆ ತಿಳಿದು । ಅಂಗಜಹರನವತಾರವಾಗಿರುತಲಿ ॥ ಮಂಗಳಮೂರುತಿ ಸ್ವರ್ಣಯಜ್ಞೋಪವೀ । ತಾಂಗ ಚಿರಂಜೀವಿ ರಾಮಸಾರಥಿ ॥ ೩ ॥ ಶರಧಿಯ ಹಾರುವ ಪರಮಸಮರ್ಥನಾಗಿ । ಶರಣರನೆಲ್ಲರ ಕೈಹಿಡಿದು ॥ ಕರುಣದೊಳಗೆ

ಭವಶರಧಿಯ ದಾಟಿಪ। ಪರಮುದಯಾಸಿಧಿ। ಕೇಸರೀಸುತ ॥ ೪ ॥ ಬೆಳದಿಂಗಳಂ ದದಿ ಬೆಳಗುವ ಕಿರುನಗೆ। ಎಳೆದಳಿರಂದದಿ ಕೋಮಲದೇಹವು ॥ ನಳಿನದಲಾ ಯತನೇತ್ರದಿ ನನ್ನೊಳು। ಬೆಳಗುತಲಿರು ನೀನು ಚಿತ್ಸ್ವರೂಪದಿ ॥—(ಭಕ್ತಿ. ೧೯)

ಆಗೇನಾಯಿತೆಂದರೆ—

ಕಂ॥ ಆಗಲಲ್ಲಿರೆಸುತ್ತ। ಸಾಗೆ ಪರಾಂತಿರಾಯ। ನಾಗೊಬ್ಬ ಯುವಸ ದೊರೆ ಬಂದು ಪೋದ; ॥ ಆ ಗುಟ್ಟನರಿಯುದಿರೆ। ಬೇಗದಿಂ ಹನುಮಂತ। ನೀ ಗಿದ್ದೆ ಸಮಯವನೆಸುತ್ತ ಬಂದ ॥

ಆಗ ತುಲಾರಾಮನು ಪಶ್ಚಾತ್ತಾಪಗೊಂಡದ್ದು—

ಚೌ॥ ಬರಲು ಸಂದಿನಿಧೀಸುವಾಡೆಸು-ತರಿಯುತದ ಕೈಬಿಟ್ಟೆನು; । ದೊರೆ ಯೆ ಕಾಡೊಳ್ಸ್ವರ್ಶಮಣಿ ತಾ-ಒರಿಯ ಶಿಲೆಯೆಂದೊಡೆದೆನು; ॥ ಇರಲು ಸುರ ತರುವೀಚಲೆಂದಾ-ತುರದೊಳದ ನಾ ತೊರೆದೆನು; । ಧರಣಿಯುಮರನು ಮನೆಗೆ ಬಂದೊಡೆ-ಕುರುಬನವನೆಂದರಿತೆನು ॥

ಹೀಗೆ ಮರುಗಿ ಅವನು ಮಾರುತಿಯನ್ನು ಮತ್ತೆ ಬೇಡಿದ್ದು—

ಕಂ॥ ನೀರೆಂಬುದೊಂದೆ ಆದೊಡ। ಮಾರಯೆ ಮೇಘಾಂಬುವಿಂದೆ ಚಾತ ಕತತಿ ಬಾ ॥ ಯಾರಿಕೆಯ ಕಳೆವವೊಲ್ನಾಂ। ಶ್ರೀರಾಮನ ರೂಪ ನೋಡಲಿಚ್ಛಿಸು ತಿರ್ಪೆಂ ॥

ಆಗ ಮಾರುತಿಯ ಪ್ರಾರ್ಥನೆಯಂತೆ ಶ್ರೀರಾಮಚಂದ್ರನು ಪ್ರತ್ಯಕ್ಷನಾಗಿದ್ದಾನೆ. ಆ ಸ್ವರೂಪವೆಂಥದ್ದೆಂದರೆ—

ಸೂ॥ ಯಲ್ಲಬ್ಧ್ವಾ ಪುಮಾನ್ ಸಿದ್ಧೋ ಭವತಿ ಅಮೃತೋ ಭವತಿ ತೃಪ್ತೋ ಭವತಿ ॥ —(ನಾ. ಭ. ಸೂ)

ಅ॥ ಯಾವದು ದೊರೆತರೆ ಮನುಷ್ಯನು ಸಿದ್ಧನೂ ಮರಣವಿಲ್ಲದವನೂ ತೃಪ್ತನೂ ಆಗುತ್ತಾನೊ (ಅಂಥದ್ದು).

ಒಡನೆ ತುಲಾರಾಮನು ನಮಸ್ಕರಿಸಿ ಸ್ತೋತ್ರಮಾಡಿದ್ದು—

ಕಲ್ಯಾಣಿ—ಭಾವು

ನಾ ನಿನ್ನ ದಾಸನಯ್ಯ; । ಸೀತಾರಾಮ, । ನಾ ನಿನ್ನ ದಾಸನಯ್ಯ ॥ ಪ ॥ ನಾನು ನಿನ್ನಯ ದಾಸನಹುದು; । ನೀನು ಈ ಜಗದೀಶನಹುದು; । ಭಾನು ಕೋಟಿಪ್ರಕಾಶನೇ, ಸಂ। ಗೀತನಾದವಿನೋದ, ರಂಗ ॥ ಅ. ಪ ॥ ಮತಿಹೀನ ನಾನಾದೆನೈ; । ಶಾಶ್ವತದ ಸ। ದ್ಗತಿಯ ನೋಡದೆ ಹೋದೆನೈ; ॥ ಹಿತವ ಪಾಲಿಸ ಬೇಕು; ಓ ಶ್ರೀ। ಪತಿತಪಾವನ, ರಂಗನಾಯಕ, । ಸತಿಶಿರೋಮಣಿಪರಮ ಸೀತಾ । ಪತಿಯ ನಾಮದ ಸುತನುಕಾಣ್ಕೆ ॥ ೧ ॥ ಕಂದಯ್ಯಗಾರು ಗತಿ? । ನಿನ್ನಯ ಚೆಲ್ವ । ಚೆಂದಪಾದವೇ ಗತಿ; ॥ ಹಿಂದೆ ಮಾಡಿದ ಕೊಲೆಗಳೆಲ್ಲ । ಮುಂದೆ ಬಾರದಂತೆ ಹರಿಯೇ, । ಇಂದಿರೇಶ, ಮುಕುಂದ, ಪರಮಾ । ನಂದ, ತುಲಸೀರಾಮದೇಶಿಕ ॥ ೨ ॥ —(ದಾ)

ಆಗ ರಾಮಚಂದ್ರನು ತನ್ನ ರಾಮಾಯಣವನ್ನು ಬರೆಯಹೇಳಿ ಆ ಉದ್ಯೋಗವನ್ನು ಹೊಗಳಿದ್ದು—

ಶ್ಲೋ॥ ಯಾತಾ ಯಾಂತಿ ಚ ಯಾತಾರೋ ಲೋಕಾಃ ಶೋಕಾಧಿಕಾ ಭುವಿ । ಕಾವ್ಯಸಂಬಂಧಿನೀ ಕೀರ್ತಿಃ ಸ್ಥಾಯಿನೀ ಚಿರಪಾಯಿನೀ ॥ —(ಸು)

ಅ॥ ದುಃಖದಲ್ಲಿ ಮುಳುಗಿ ತೇಲುವ ಜನರು ಹಿಂದೆ ಆಗಿ ಹೋದರು; ಈಗ ಇದ್ದಾರೆ; ಮುಂದೆ ಹುಟ್ಟುತ್ತಾರೆ. ಕಾವ್ಯಸಂಬಂಧವುಳ್ಳವರ ಕೀರ್ತಿಯು ಮಾತ್ರ ಅಚ್ಚಳಿಯದೆ ನಿಲ್ಲುವದು.

ಅವರನ್ನು ಕುರಿತು ನೀತಿಶಾಸ್ತ್ರಕಾರರು ಹೊಗಳಿರುವದೇನೆಂದರೆ—

ಶ್ಲೋ॥ ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ । ನಾಸ್ತಿ ಯೇಷಾಂ ಯಶಃಕಾಯೇ ಜರಾಮರಣಜಂ ಭಯಮ್ ॥ —(ಸು)

ಅ॥ ರಸಸಿದ್ಧರಾದ ಕವೀಶ್ವರರು ಪುಣ್ಯಶಾಲಿಗಳಾಗಿರುತ್ತಾರೆ. ಅವರ ಕೀರ್ತಿಶರೀರಕ್ಕೆ ಮುಪ್ಪಿನ ಮತ್ತು ಸಾವಿನ ಭಯವಿಲ್ಲ.

ಈ ಶಾಶ್ವತತ್ವವು ಕಾವ್ಯವನ್ನು ಮಾಡಿದವನೊಬ್ಬನಿಗೇ ಅಲ್ಲ—

ಶ್ಲೋ॥ ತೇ ಧನ್ಯಾಸ್ತೇ ಮಹಾತ್ಮಾನಸ್ತೇಷಾಂ ಲೋಕೇ ಸ್ಥಿತಂ ಯಶಃ । ಯೈರ್ನಿಬದ್ಧಾನಿ ಕಾವ್ಯಾನಿ ಯೇ ವಾ ಕಾವ್ಯೇಷು ಕೀರ್ತಿತಾಃ ॥ —(ಸು)

ಅ॥ ಯಾರು ಕಾವ್ಯವನ್ನು ಬರೆಯುತ್ತಾರೊ ಯಾರು ಕಾವ್ಯದಲ್ಲಿ ಹೇಳಿಕೆಯನ್ನು ಪಡೆಯುತ್ತಾರೊ ಅವರೇ ಧನ್ಯರು; ಅವರೇ ಮಹಾತ್ಮರು; ಅವರ ಯಶಸ್ಸೇ ನಿಂತಿರುವದು.

ಈ ರೀತಿಯಲ್ಲಿ ಶ್ರೀರಾಮನ ಅನುಗ್ರಹಕ್ಕೆ ಪಾತ್ರನಾಗಿ ತುಲಸೀದಾಸನೆಂದು ಹೆಸರು ಹೊಂದಿದವನ ವಿಷಯವಾಗಿ ಕವಿ ಬರೆದಿರುವದೇನೆಂದರೆ—

ಶ್ಲೋ॥ ಆತ್ಮಾರಾಮಸಮುದ್ಭೂತಿಸ್ತುಲಸ್ಯಾಮೋದಮಂದಿರಮ್। ಸುಮನಃ ಕೋಟಿತಃ ಪ್ರೀತ್ಯೈ ಶ್ರೀರಾಮಸ್ಯ ಭವೇನ್ನ ಕಿಮ್ ॥ —(ಸು. ಲಾ)

ಅ॥ (೧) (ಆತ್ಮ + ಆರಾಮ + ಸಮುದ್ಭೂತಿಃ) ಆತ್ಮಾನಂದದ ಉತ್ಕರ್ಷಉಳ್ಳಂಥ ಅಥವಾ ತಮ್ಮ ತೋಟದಲ್ಲಿ ಹುಟ್ಟಿದಂಥ (ತುಲಸ್ಯಾಮೋದಮಂದಿರಂ) ತುಲಸಿಯ ಸುವಾಸನೆಯ ಮನೆಯಾದ ವೃಂದಾವನವು (ಸುಮನಃ) ಕೋಟ್ಯಂತರ ಹೂಗಳಿಗಿಂತ ಶ್ರೀರಾಮನಿಗೆ ಪ್ರೀತಿಕಾರಕವಲ್ಲವೆ? (೨) ಆತ್ಮಾರಾಮನಿಗೆ ಆನಂದವನ್ನು ಕೊಡತಕ್ಕಂಥ ತುಲಸೀದಾಸನು ಕೋಟಿ (ಸುಮನಃ) ಸಾಧುಗಳಿಗಿಂತ ಶ್ರೀರಾಮನಿಗೆ ಬೇಕಾದವನಲ್ಲವೆ?

ಈ ಸಂದರ್ಭದಿಂದ ತುಲಸೀದಾಸನು ಸಿದ್ಧಪುರುಷನಾದಮೇಲೆ ಅವನು ಎಷ್ಟೇ ವೈರಾಗ್ಯದಿಂದಿದ್ದರೂ ಅವನಿದ್ದ ಕಡೆ ಲೆಕ್ಕವಿಲ್ಲದಷ್ಟು ಜನಕ್ಕೆ ಬಂಗಾರದ ತಟ್ಟೆಗಳಲ್ಲಿ ಊಟವಾಗಿ ದೇವತಾಸೇವೆ ನಡೆಯುತ್ತಿದೆ. ಇದನ್ನು ನೋಡಿ ಒಬ್ಬ ಭಕ್ತನು ಹೇಳಿರುವದೇನೆಂದರೆ—

ಕಂ॥ ಮನೆ ರಜತಗಿರಿ, ಬೆರಳ । ಕೊನೆಯೊಳ್ಸುವರ್ಣಗಿರಿ, । ಯೆಣಿಪೆನೆಂದರೆ ಕಯ್ಯೊಳಿಲ್ಲ ಕಾಸು ; ॥ ಅಣಿಮಾದಿಸಿದ್ಧಿಗಳು ತೃಣಕೆ ಕಡೆ ಯಾರಿಗಾ । ಅನುಘ ಸದ್ಗುರುದೇವನಡಿಗೆರಗುವೆಂ ॥ —(ಗು. ಸ್ತು. ಸು)

ಹೀಗಿರುವಾಗ—

ಭಾ॥ ಬಂದಿರುಳೊಳಾ ಕೂಟದೊಳಗೊಳ । ಸಂದ ಕಳ್ಳರು ಜನರು ಮಲಗಿದ । ಸಂದಸಂದಾ ಚಿನ್ನದಟ್ಟಿಗಳನ್ನು ಗಂಟಿನೊಳು ॥ ಬಂಧಿಸುತ ಹೊರಬೀಳಲೈತರ । ಲಂದು ನಾಲ್ಕುಂ ಬಾಗಿಲೊಳು ಬ । ಲ್ಪಿಂದಿರಲು ಕಾವಲಿಗರಲ್ಲಿಯೆ ಉಳಿದವರವರಂದು ॥

ಬೆಳಗಾಗುತ್ತಲೆ ತುಲಸೀದಾಸನು ಅವರನ್ನು ಕಂಡು ನಡೆದ ಸಂಗತಿಯನ್ನು ತಿಳಿದು ತನ್ನವರನ್ನು ಕರೆದು ಕಳ್ಳರಿಗೆ ತಡೆಮಾಡಿದ್ದಕ್ಕೆ ಗದರಿಸಲು ಅವರೆಲ್ಲರೂ ತಾವು ಆ ಕೆಲಸವನ್ನು ಮಾಡಲಿಲ್ಲವೆಂದರು. ಆಮೇಲೆ ಆ ಕಾವಲಿಗರ ಸ್ವರೂಪವನ್ನು ವಿಚಾರಿಸಲಾಗಿ ಅವರು ರಾಮಲಕ್ಷ್ಮಣರೆಂದು ಗೊತ್ತಾಯಿತು. ಒಡನೆ ತುಲಸೀದಾಸರು ಹಾಡಿದ್ದು—

ಮಾಂಜಿ—ರೂಪಕ

ರಾಮಚಂದ್ರೇಣ ಸಂರಕ್ಷಿತೋಽಹಂ ಸೀತಾ । ರಾಮಚಂದ್ರೇಣ ಸಂರಕ್ಷಿತೋಽಹಂ ॥ ಪ ॥ ಭಾರತೀಗೌರೀರಮಾರಮಣಸ್ವರೂಪೇಣ । ಸೀತಾ ॥ ಅ. ಪ ॥ ಕಾಮಕೋಟಿಸುಂದರೇಣ ಕಮನೀಯಕಂಧರೇಣ । ಕೋಮಲಘನಶ್ಯಾಮೇನ ಕೋದಂಡರಾಮೇಣ ॥ ಮಾಮಕಹೃದಯಸ್ಥಿತೇನ । ಮಾರುತಿಗೀತಾಮೃತೇನ । ಮಾಂಜೀರಮಣಿಮಂಡಿತ । ಮದ್ಗುರುಗುಹಮಾಸಿತೇನ ॥ ೧ ॥ —(ದಾ)

ಆಗ ಕಳ್ಳರೂ ತಾವು ಧನ್ಯರೆಂದುಕೊಂಡದ್ದು—

ಸೀ॥ ಭರದಿಂದ ಸಪ್ಪನ್ನೆ ಕೊಯ್ಯಬಂದರೆ ಸಾವು—ನೆರೆ ಸಿದ್ಧಬಳ್ಳಿ ಕಾಲ್ತೊಡರಿ ಬಂತು ; । ತಿರುತಿರುಗಿ ಕಲ್ಲುಗಳನಾಯ್ದು ಮೊಡೆ ಹುಡುಕುತಿರೆ—ಮಿರುಗುವಾ ಸ್ಪರ್ಶಮಣಿ ಕೈಗೆ ಸಂತು ; । ತಿರಿತಿರಿದು ಗಂಜಿಯನು ಪಡೆಯೆ ಕಸವರಿಸುತಿರೆ—ಪರಮಾನ್ನದೂಟದಿಂ ತೃಪ್ತಿಯಾಯ್ತು ; । ಅರಿಯೆ ಯತ್ನಿಸೆ ಕಾಮಶಾಸ್ತ್ರವನು ವೇದಾಂತ—ವಿರದೆ ತಾನೇ ಸುಲಭದಲಿ ದೊರಕಿತು ; ॥ ತರಣಿ ಬರೆ ಕತ್ತಲೆಯು ಹೋಗುವಂತೆ । ಸರಿದು ಹಿಂದಾಯ್ತೆಮ್ಮ ಕೆಟ್ಟ ಚಿಂತೆ; । ತೊರೆದೆವೈ ಯಮಪುರದ ದಾರಿಯನ್ನು; । ನೆರೆ ಹೋಗುತಿಹೆವು ವೈಕುಂಠಕಿನ್ನು ॥

ಹೀಗೆ ತುಲಸೀದಾಸರಿಗೆ ರಾಮದರ್ಶನವಿರುವದೆಂಬ ಸುದ್ದಿಯನ್ನು ಕೇಳಿ ಮೊಗಲಚಕ್ರವರ್ತಿಯು ಅವರನ್ನು ತನ್ನ ಮನೆಗೆ ಕರೆಸಿಕೊಂಡು ರಾಮನನ್ನು ತೋರಿಸಿದ ಹೊರತು ಹೊರಕ್ಕೆ ಬಿಡುವದಿಲ್ಲವೆಂದಾಗ ತುಲಸೀದಾಸರು ಮಾರುತಿಗೆ ಶರಣುಹೋದದ್ದು—

ಬಿಲಹರಿ—ಏಕತಾಳ

ಮಾರುತೀ ಪೊರೆ ನೀಂ । ಯೋಗಿವಂದಿತ, ಮುನಿನುತ, ॥ ಪ ॥ ಧೀರ, ವೀರರ ವೀರ, ಗುಣಗಂಭೀರ, ಬೇಡುವೆನು ॥ ಅ. ಪ ॥ ರೋಗಪೀಡೆಯ ಹೋಗಲಾಡಿಸಿ । ಭೋಗಭಾಗ್ಯಗಳನ್ನು ನೀಡಿ ॥ ಯೋಗಾರೂಢರನಾಗಿಸುವ ವಿ । ರಾಗಿವಿನುತನೆ ॥ ೧ ॥ ರಾಮನ ಯೋಚನೆ ಮಾಡುವ ಸೀತೆಗೆ । ರಾಮವಾರ್ತೆಯನೆಲ್ಲ ಹೇಳಿದೆ; ॥ ರಾಮನಾಮವನಾದರೂ ಹೇಳುತ । ಕಾಮಿತವ ಕೊಡು

|| ೨ || ನಿನ್ನಯ ಮಾನಸದಲ್ಲಿ ಶ್ರೀರಾಮನು | ಉಲ್ಲಾಸದೊಳು ಶೋಭಿಸು ತಿರ್ಪನು; || ಎನ್ನ ಮಾನಸದಲ್ಲಿ ಸೀನೇ ನಿಲ್ಲು ಚಿನ್ಮಯ || —(ಭಕ್ತಿ. ೧೭)

ಆಗ ತಮಗೆ ಮಾತ್ರ ಪ್ರತ್ಯಕ್ಷನಾದ ಮಾರುತಿಯ ಮುಂದೆ ಆಗ ಒದಗಿದ್ದ ಪ್ರಸಂಗವನ್ನು ಹೇಳಿಕೊಳ್ಳಲು ಅದಕ್ಕೆ ತಕ್ಕ ಹಾಗೆ ಮಾಡುತ್ತೇನೆಂದು ಹೇಳಿ ಮಾರುತಿ ಅದೃಶ್ಯನಾಗುತ್ತಲಿ ಊರೆಲ್ಲ ರಾಮದೂತರು ತುಂಬಿ ಮಾಡಿದ ಹಾವಳಿ—

ರ|| ಮನೆಗಳೇರಿ ಗೋಡೆಗಳನುರುಳಿಸುತ | ಜನರ ಮೇಲೆ ಮರಗಳ ಕಿತ್ತೆಸೆಯುತ | ಸಿಕ್ಕಿದವರ ಕಿವಿಮೂಗನು ಕೊಯ್ಯುತ | ಪಕ್ಕಗಳಿಗೆ ಕೂಸುಗಳ ನಿರುಕುತ | ಕೆಲರ ಕಾಲಹಿಡಿದಾಗಸಕೆಸೆಯುತ | ಕೆಲರ ಕೆಡಹಿ ಕಾಲಿಂದಲಿ ಹೊಸಕುತ | ಲೋಭಿಜನಂಗಳ ಹಿಂಸೆಯಗೆಯ್ಯುತ | ಶೋಭಿಪಲಂಕಾರಂಗಳ ಹೊಯ್ಯುತ | ಧನಕನಕಂಗಳ ಸೂರೆಯ ಮಾಡುತ | ಜನಗಳ ಬಹುಪರಿಯಿಂದಲಿ ಕಾಡುತ | ದಾರಿಯೊಳಗೆ ಕಂಡವರನು ಕೆಣಕುತ | ದೂರಕ್ಕೈದಿ ಕಣ್ಣುಗಳ ಮಿಣುಕಿಸುತ ||

ರಾಜನು ಈ ಗದ್ದಲಕ್ಕೆ ಕಾರಣವೇನೆಂದು ಕೇಳಿದಾಗ ತುಲಸೀದಾಸರು ಹೇಳಿದ್ದು—

ಸಾ|| ತರಣಿ ಬರುವದಕೆ ಮುಂಚಿತವಾಗಿಯೆ | ಅರುಣನು ತಾ ಬರುವಂತೆ || ಅರಿಯೆ ರಾಮನ್ನೈತಹ ಮೊದಲಾತನ | ಚರರಿವರ್ಕೈ; ಬಿಡು ಚಿಂತೆ ||

ಇನ್ನು ಹೆಚ್ಚು ಅಪಾಯವಾದೀತೆಂದು ರಾಜನು ಬೇಡಿಕೊಳ್ಳುತ್ತಲಿ ತುಲಸೀದಾಸರ ಮಾತಿನಂತೆ ರಾಮಸೇನೆಯದೃಶ್ಯವಾಯಿತು. ಆಮೇಲೊಂದು ದಿನ—

ಕೀ|| ಪಾತಕಿಯೊಬ್ಬನು 'ರಾಮ' ಎಂದು ಬರೆ | ಪ್ರೀತಿಯಿಂದ ತನ್ನೊಡನೆ ವಗೆ || ರೀತಿಯನರಿತೂಟವಿಟ್ಟು ಪಾಪವು | ಹೋಯ್ತೆಂದನು ತಾ ಜನಗಳಿಗೆ ||

ಹೀಗೆ 'ರಾಮ' ಎಂದ ಮಾತ್ರದಿಂದ ಪಾಪವು ಹೋಗುವದನ್ನು ತೋರಿಸುತ್ತ ಬಂದದ್ದನ್ನು ನೋಡಿ—

ಸಾ|| ಕಲಿಪುರುಷನು ಕನಸಿನೊಳು ಬೆದರಿಸಲು | ಸಲೆ ಮಾರುತಿಯನು ನೆನೆಯೆ || ತಿಳಿಯ ಹೇಳಿದನು ವಿನಯಪತ್ರವನು | ಕುಲದೈವಕೆ ತಾ ಬರೆಯೆ ||

ಅದರಪ್ರಕಾರ ತುಲಸೀದಾಸರು ವಿನಯಪತ್ರಿಕೆ ಯೆಂಬ ಗ್ರಂಥವನ್ನು ಬರೆದದ್ದಲ್ಲದೆ ರಾಮಾಯಣವನ್ನು ದೇಶಭಾಷೆಯಲ್ಲಿ ಬರೆದು ಪೂರ್ಣಮಾಡಿದರು. ರಾಮಾಯಣದಂಥ ಪವಿತ್ರವಿಷಯವು ಸಂಸ್ಕೃತದಲ್ಲಿಯೇ ಇರಬೇಕಾಗಿತ್ತೆಂದು ಒಬ್ಬರು ಆಕ್ಷೇಪಿಸಿದ್ದಕ್ಕೆ ತುಲಸೀದಾಸರು ಹೇಳಿದ್ದು—

ಸಾಂ|| ಹೆಣ್ಣು ವರ್ಣನೆಯ ಸಂಸ್ಕೃತದಿ ಮಾಳ್ಪುದಕಿಂತ | ಅನ್ನಿದುತ್ತಮವೆನಿಸುವದು; || ಚಿನ್ನದ ಬಟ್ಟಲ ವಿಷಕಿಂತ ಕುಡಿಕೆಯ | ಬಿನ್ನಣದಮೃತ ಲೇಸಲ್ತೆ? ||

ಈ ಪ್ರಕಾರವಾಗಿ ತುಲಸೀದಾಸರು ತಾವೂ ಸಾಧುವೃತ್ತಿಯನ್ನವಲಂಬಿಸಿ ಇತರರಿಗೆ ಭಕ್ತಿಪಂಥದ ರಾಜಮಾರ್ಗವನ್ನೂ ತೋರಿಸಿ ತಮ್ಮ ಜನ್ಮವನ್ನು ಸಾರ್ಥಕವಮಾಡಿಕೊಂಡರು. ಇದನ್ನರಿತೇ ಕೀರ್ತನಾರಂಭದಲ್ಲಿ ಭಾಗವತಶಿರೋಮಣಿಗಳು 'ಸಾಧುವೃತ್ತಿಯೊಳಗಿರುವದನು ಬಯಸು' ಎಂದುಪದೇಶಮಾಡಿರುವರು.

---

# ಶ್ರೀಸಮರ್ಥ ರಾಮದಾಸರು

---

## ಪೀಠಿಕೆ — ಜನ್ಮಸಾರ್ಥಕತೆ

**ಪಂತುವರಾಳಿ—ಏಕತಾಳ**

ಜನ್ಮಸಾರ್ಥಕತೆಯ | ಸಾಧನ | ವನ್ನು ಕೇಳು ನೀನು ‖ ಪ ‖ ಇನ್ನಿದರುಪೇಕ್ಷೆ | ಯನ್ನು ಮಾಡೆ ನೀ | ನಿನ್ನೀ ಧರೆಯೊಳು | ಬನ್ನಬಡುವೆಯೆಲೊ ‖ ಅ. ಪ ‖ ವಿಷಯಸುಖವು ಕೀಳೆಂದರಿತದ | ಕಸದಂದದಿ ಕಳೆದು ‖ ಹೊಸ ಧಾರ್ಮಿಕತೇಜವ ಮೈಗೂಡಿಸಿ | ರಸೆಯೊಳಗದನೇ ಹರಡು ಜನಗಳೊಳು ‖

**ಜನರು ಪ್ರಾಪಂಚಿಕವಸ್ತುಗಳನ್ನೆ ತಮ್ಮ ಸುಖಕ್ಕೆ ಆಧಾರವೆಂದು ನಂಬಿ ಮೋಸಹೋಗಿರುವದನ್ನು ನೋಡಿ ವಿವೇಕಿಗಳು ಎಚ್ಚರಿಸಿರುವದೇನೆಂದರೆ—**

ವೃ‖ ಸುರಧನುವೆಂತುಟಂತೆ, ವಿಳಸಜ್ಜಳಬುದ್ಬುದವೆಂತುಟಂತೆ, ಪೆ | ರ್ದೆರೆಯಿರವೆಂತುಟಂತೆ, ಕಿಸುಸಂಜೆಯ ರಂಜನೆಯೆಂತುಟಂತೆ, ಭೂ | ಧರನದಿಯೆಂತುಟಂತೆ, ಮುಗಿಲೊಡ್ಡಣದಾಕೃತಿಯೆಂತುಟಂತೆ, ಮ | ರ್ತ್ಯರ ತನುವುಂ ಕಳತ್ರಜನಮುಂ ಧನಮುಂ ಬಗೆದಂತು ನೋಳ್ಪೊಡಂ ‖ —(ಜೀ. ಸಂ)

**ಇದನ್ನರಿತು ನೀತಿಶಾಸ್ತ್ರಕಾರರು ಉಪದೇಶಿಸಿರುವದೇನೆಂದರೆ—**

ಶ್ಲೋ‖ ದುಃಖಾಂಗಾರಕತೀವ್ರಃ | ಸಂಸಾರೋಽಯಂ ಮಹಾನಸೋ ಗಹನಃ ‖ ಇಹ ವಿಷಯಾಮೃತಲಾಲಸ | ಮಾನಸಮಾರ್ಜಾರ, ಮಾ ಪಿಬ ತತ್ ‖

—(ಸು)

**ಅ‖ ಈ ಸಂಸಾರವೆಂಬ ಅಡಿಗೆಯ ಮನೆಯು ದುಃಖವೆಂಬ ಬೆಂಕಿಯ ಬೇಗೆಯುಳ್ಳದ್ದಾಗಿ ಪ್ರವೇಶಕ್ಕೆ ಸಲ್ಲದ್ದಾಗಿರುವದು. ವಿಷಯವೆಂಬ ಹಾಲನ್ನು ಕುಡಿಯಲಿಚ್ಛಿಸುವ ಮನಸ್ಸೆಂಬ ಬೆಕ್ಕೇ, ಅದನ್ನು ನೀನು ಕುಡಿಯಬೇಡ.**

**ಆ ವಿಷಯಗಳ ದುಷ್ಟಗುಣವೆಂತಿರುವದೆಂದರೆ—**

ಶ್ಲೋ‖ ವಿಷಸ್ಯ ವಿಷಯಾಣಾಂ ಚ ದೂರಮತ್ಯಂತಮಂತರಮ್ | ಉಪಭುಕ್ತಂ ವಿಷಂ ಹಂತಿ ವಿಷಯಾ ಸ್ಮರಣಾದಪಿ ‖ —(ಸು)

**ಅ‖ ವಿಷಕ್ಕೂ ವಿಷಯಗಳಿಗೂ ಬಹಳ ಹೆಚ್ಚುಕಡಿಮೆ ಇದೆ. ವಿಷವು ತಿಂದವನನ್ನು ಕೊಲ್ಲುವದು. ವಿಷಯವು ನೆನೆಸಿಕೊಂಡರೇ ಕೊಲ್ಲುವದು.**

**ಆದ್ದರಿಂದ ಒಬ್ಬ ಮುಮುಕ್ಷು ತನ್ನ ಮನಸ್ಸಿಗೆ ಹೇಳಿಕೊಂಡಿರುವದೇನೆಂದರೆ—**

**ಲತಾಂಗಿ-ಆದಿತಾಳ**

ಮನವೇ, ಮನವೇ, ಬೆಸಗೊಳ್ಳುವೆ ನಾ | ಅಸುವಿಂದಲಿ ಲಾಲಿಸು ನೀನೀಗ ‖ ಪ ‖ ಅಸಿಮಿತ್ರದಿಂದ ಮುನಿದೆನ್ನನೊಯ್ದು | ಜನಿಮೃತ್ಯುವಿನೊಳು ಹಾಕಬೇಕೆ? ‖ ಅ. ಪ ‖ ಬಗೆಬಗೆಯಾದ ದುಃಖಗಳನಿತ್ತು | ಹಗರಣಕೇ ಗುರಿಮಾಡು

ವಂಥ ॥ ಜಗದೊಳಗಣ ವಿಷಯಂಗಳ । ಸೊಗಸಿಗೆ ಸೀ ಬೆರಗಾಗಬೇಡ ॥ ೧ ॥ ಧರೆಯಲ್ಲಿ ಮಾಡಿ ಮುಗಿಸಲಾರದಷ್ಟು । ಪರಿಪರಿ ಪುಣ್ಯಕರ್ಮವಿರುವಾಗ ॥ ತೊರೆದವುಗಳ ಪಾಪವನ್ನೆ ಮಾಡಿ । ಬರಿ ಕಷ್ಟಕೀ ಗುರಿಯಾಗಬೇಡ ॥ ೨ ॥ ತಿಳಿರಿರ್ಪ ಧರ್ಮಮಾರ್ಗವನ್ನು ತಪ್ಪಿ । ಬಳಲುತ್ತ ಚಿದ್ರೂಪವನರಿಯದೆ ॥ ಬಲುಕಷ್ಟವಾದ ಸಂಸಾರವೆಂಬ । ಬಲೆಯಲ್ಲಿ ಸಿಕ್ಕಿ ಬಲಿಯಾಗಬೇಡ ॥ ೩ ॥—(ಭಕ್ತಿ.ಗೀ)

ಜಗತ್ತಿನಲ್ಲಿ ನಿಜವಾದ ಸುಖಸಾಧನಗಳು ಯಾವವೆಂದರೆ—

ವೃ॥ ಒಳ್ಳೆಯುವರೊಡನಾಟ, ನಿನ್ನ ಪೂಜೆಯ ಪ್ರೀತಿ,-ಇಲ್ಲ ಸಮನೆನಿಪ ಜ್ಞಾನ, । ಸೊಲ್ಲಿಸಲ್ಕಿವು ಮೂರ ಹೊರತುಂಟೆ ನೋಡೆ ಜಗ-ದಲ್ಲಿ ನಿಜಸೌಖ್ಯಸದನ? ॥ ಉಳ್ಳ ಮನೆ, ಮಠ, ಹಣವು, ಹುರುಳು, ಹೆಂಡಿರು, ನಂಟ-ರೆಲ್ಲರೊಡನಿರುವ ಹದನ । ಎಲ್ಲ ನೋಡಲು ಪೊಳ್ಳುಬಾಳು ಹೊರಗಣ ಮಾಯೆ-ಯಲ್ಲವೇ? ಏಕಾಂಬರ ॥ —(ಹ. ಹಂ)

ನಿಜವಾದ ಸುಖಸಾಧನಗಳನ್ನು ಹಿಡಿದು ದೊಡ್ಡವನೆನಿಸಿಕೊಳ್ಳುವದಕ್ಕೆ ಬೇಕಾದ ಲಕ್ಷಣಗಳೇನೆಂದರೆ—

ಶ್ಲೋ॥ಕರೇ ಶ್ಲಾಘ್ಯಸ್ತ್ಯಾಗಃ; ಶಿರಸಿ ಗುರುಪಾದಪ್ರಣಯಿತಾ, ।ಮುಖೇ ಸತ್ಯಾ ವಾಣೀ, ವಿಜಯಿ ಭುಜಯೋರ್ವೀರ್ಯಮತುಲಮ್, ॥ ಹೃದಿ ಸ್ವಸ್ಥಾವೃತ್ತಿಃ, ಶ್ರುತಮಧಿಗತೈಕವ್ರತಫಲಂ । ವಿನಾಪ್ಯೈಶ್ವರ್ಯೇಣ ಪ್ರಕೃತಿಮಹತಾಂ ಮಂಡನಮಿದಮ್ ॥ —(ಸು)

ಅ॥ ಕೈತುಂಬ ಚೆನ್ನಾಗಿ ದಾನಮಾಡುವದು, ತಲೆಯನ್ನು ಗುರುಗಳ ಪಾದದ ಮೇಲೆ ಇಡುವದು, ಬಾಯಲ್ಲಿ ನಿಜವಾದ ಮಾತಾಡುವದು, ತೋಳುಗಳಲ್ಲಿ ಜಯವನ್ನು ಪಡೆಯುವಂಥ ಅಸಾಧಾರಣವಾದ ಬಲವಿರುವದು, ಚೆನ್ನಾಗಿ ಓದಿರುವದು, ಒಂದು ವ್ರತವನ್ನು ಚೆನ್ನಾಗಿ ನಡೆಸಿ ಫಲವನ್ನು ಪಡೆದಿರುವದು—ಇವು ಐಶ್ವರ್ಯವಿಲ್ಲದಿದ್ದರೂ ಸ್ವಭಾವದಿಂದ ದೊಡ್ಡವರೆನಿಸಿಕೊಂಡವರಿಗೆ ಆಭರಣಪ್ರಾಯಗಳು.

ಇಷ್ಟೆಲ್ಲ ಯೋಗ್ಯತೆಯುಂಟಾಗುವದಕ್ಕೆ ಮುಖ್ಯವಾದ ಒಂದು ಸಾಧನವೇನೆಂದರೆ—

ಶ್ಲೋ॥ ತ್ರಿಭುವನವಿಭವಹೇತವೇಽಪ್ಯಕುಂಠ । ಸ್ಮೃತಿರಜಿತಾತ್ಮಸುರಾದಿಭಿರ್ವಿಮೃಗ್ಯಾತ್ ॥ ನ ಚಲತಿ ಭಗವತ್ಪದಾರವಿಂದಾ । ಲ್ಲವನಿಮಿಷಾರ್ಧಮಪಿ ಯಃ ಸ ವೈಷ್ಣವಾಗ್ರ್ಯಃ ॥ —(ಸಂ. ಭಾಗ)

ಅ॥ ಮೂರುಲೋಕಗಳ ಐಶ್ವರ್ಯವೂ ದೊರೆಯುವದೆಂದರೂ ದೇವತೆಗಳು ಕೂಡ ಹುಡುಕುತ್ತಿರುವಂಥ ಭಗವಂತನ ಪಾದಗಳ ಸ್ಮರಣೆಯನ್ನು ಅರೆನಿಮಿಷವಾದರೂ ಯಾವನು ಬಿಟ್ಟು ಕದಲುವದಿಲ್ಲವೊ ಅವನು ವಿಷ್ಣುಭಕ್ತರಲ್ಲೆಲ್ಲ ಹೆಚ್ಚಿನವನು.

ಪ್ರಾಪಂಚಿಕರ ಸ್ಥಿತಿಯು ಇದಕ್ಕೆ ಸಂಪೂರ್ಣ ವಿರುದ್ಧವಾಗಿರುವದೆಂತೆಂದರೆ—

ಪೂರ್ವಿ—ಏಕತಾಳ

ಹರಿಹರಿಯೆನ್ನಲಿಕ್ಕೆ ಹೊತ್ತಿಲ್ಲ; । ಈ । ನರಜನ್ಮ ವ್ಯರ್ಥ ಹೋಗುತ್ತದಲ್ಲ ॥ ಪ ॥ ಹರಿಜಾಗರಣೆಯಲ್ಲಿ ಪಾರಣೆಚಿಂತೆ; । ನಿರುತ ಯಾತ್ರೆಯಲ್ಲಿ ಶಾಕದ ಚಿಂತೆ;।

ಸರುವ ಸತ್ಕಾರ್ಯರ್ದಿ ಧನದ ಮೇಲಿನ ಚಿಂತೆ; । ಪುರಾಣ ಕೇಳ್ವಾಗ ಗೃಹದ ಚಿಂತೆ ॥ ೧ ॥ ಕರ್ಮದಿ ಒಂದು ಚಿಂತೆ; ಧರ್ಮದಿ ಒಂದು ಚಿಂತೆ; । ಪೆರ್ಮನ ಮಾಡಲು ಬಲು ಚಿಂತೆ; ॥ ಮರ್ಮವೈರದಿ ಚಿಂತೆ; ಈರ್ಮನಸ್ಸಾಗೆ ಚಿಂತೆ । ದುರ್ಮದದಿ ನಡೆಯೆ ಪ್ರಾಣದ ಚಿಂತೆ ॥ ೨ ॥ ಗಂಗೆ ಮುಳುಗುವಾಗ ಚೆಂಬು ಮೇಲಿನ ಚಿಂತೆ । ಸಂಗಡದವರು ಪೋಗುವ ಚಿಂತೆ । ಪನ್ನಂಗಶಯನ ಶ್ರೀಪುರಂದರವಿಠಲನ್ನ । ಹಿಂಗದೆ ಭಜಿಸಲು ಸತತ ನಿಶ್ಚಿಂತೆ ॥ ೩ ॥ —(ದಾ)

ಟಿ॥ ಮರ್ಮ—ಒಳಸಂಚು. ಈರ್ಮನಸು—ಎರಡಾದ ಮನಸ್ಸು.

ಹರಿಯನುಗ್ರಹಕ್ಕೆ ಪಾತ್ರರಾದವರ ಯೋಗ್ಯತೆಯನ್ನು ಕುರಿತು ದೊಡ್ಡವರು ಹೇಳಿರುವದೇನೆಂದರೆ—

ವ॥ ಕಾಮನ ಸುಟ್ಟು ಹೇಮವನುರುಹಿ ತ್ರಿಪುರಸಂಹಾರದ ಕೀಲವನರಿಯಬಲ್ಲಡೆ ಯೋಗಿಯಾದಡೇನು ಭೋಗಿಯಾದಡೇನು ಶೈವನಾದಡೇನು ಸಂನ್ಯಾಸಿಯಾದಡೇನು ಅಶನವ ತೊರೆದಾತ ವ್ಯಸನವ ಮರೆದಾತ ಗುಹೇಶ್ವರಲಿಂಗದಲ್ಲಿ ಆವರ ಹಿರಿಯರೆಂಬೆನು ॥ —(ವೀ. ವ. ಶಾ)

ಟಿ॥ ತ್ರಿಪುರಸಂಹಾರದ—ಕಾಮಕ್ರೋಧಲೋಭಗಳನ್ನು ಗೆಲ್ಲುವ. ಕೀಲವ—ಕೀಲನ್ನು.

ಏಕೆಂದರೆ—

ಸೂ॥ ಸ ತರತಿ ಸ ತರತಿ ಸ ಲೋಕಾಂಸ್ತಾರಯತಿ ॥ —(ನಾ. ಭ. ಸೂ)

ಅ॥ ಅವನು ದಾಟುತ್ತಾನೆ, ದಾಟುತ್ತಾನೆ. ಅವನು ಇತರರನ್ನೂ ದಾಟಿಸುತ್ತಾನೆ.

ಅವನು ಆಮೇಲೆ ಜಗತ್ತಿಗೆ ಮೋಸಹೋಗುವದಿಲ್ಲವೆಂದು ಕವಿ ಹೇಳಿರುವದೇನೆಂದರೆ—

ತ್ರಿ॥ ತನ್ನ ತಾನರಿದಂಗೆ ಮುನ್ನ ಹೊದ್ದದು ಮಾಯೆ; । ಉನ್ನತವಪ್ಪ ಗಜವೇರಿ ಬರುವವನ । ಕುನ್ನಿ ಕಚ್ಚುವದೆ? ಸರ್ವಜ್ಞ ॥ —(ಸ. ಪ)

ಇದನ್ನೆಲ್ಲ ವಿಚಾರಮಾಡಿ ಜ್ಞಾನಿಗಳುಪದೇಶಿಸಿರುವದೇನೆಂದರೆ—

ಬಿಲಹರಿ—ರೂಪಕ

ಏಳಿರೇಳಿರಿ । ಎಚ್ಚರಗೊಳ್ಳಿರಿ । ನೀವಿ । ನ್ನೇಳಿರೇಳಿರಿ ॥ ಪ ॥ ಏಳಿರೇಳಿ ಬಾಳಿ ಬದುಕಿ । ಕೀಳುಸಂಸ್ಕೃತಿ । ಕಾಳುಗೊಳಿಸುವರೆ? ನೀವಿ । ನ್ನೇಳಿ ॥ ಅ ಪ ॥ ಏಕೆ ಮರೆದಿರಿ? । ಶುದ್ಧಾತ್ಮನ ಸವ್ಮೋಹದೊ । ಳೇಕೆ ಬೆರೆದಿರಿ? ॥ ಜೋಕೆ ಕೆಡುವಿರೇಕಿದಿಂತು । ಕಾಕುಬುದ್ಧಿಯ ನೂಕುತಲಾತ್ಮನ ಜಾನಿಸುತೇಳಿ ॥ ೧ ॥ ಧರ್ಮ ಮಾಡಿರಿ; । ನಿಷ್ಕಾಮದ ಕರ್ಮಂಗಳ । ಮರ್ಮ ನೋಡಿರಿ; ॥ ಕರ್ಮದ ಫಲ ವಿಮ್ಮಡಿಸುವ । ದೊಮ್ಮೆವ್ಯಾಪ್ತ ಚರ್ಮನ ನಾಮವ ನೆನೆಯುತ । ಲೇಳಿ ॥ ೨ ॥ ಗುರುವ ಕಾಣಿರಿ; । ಸಂಸಾರದ ಮಾಯಾಕೃತಿ । ಯಿರವ ಮಾಣಿರಿ; ॥ ಸರುವರಲ್ಲಿ ಶರುವನಿರುವ । ಧರವ ಶಂಕರ । ಗುರುವರನೊರೆವುದನಾಲಿಸು । ತೇಳಿ ॥ ೩ ॥ —(ಅ. ಗೀ)

ಟಿ॥ ಸರುವ—ಸರ್ವ. ಶರುವ—ಶರ್ವ; ಈಶ್ವರ.

ಈ ಅರ್ಥವನ್ನೆಲ್ಲ ಸಂಗ್ರಹಮಾಡಿಯೇ ಕೀರ್ತನಾರಂಭದಲ್ಲಿ ಭಾಗವತಶಿರೋಮಣಿಗಳು "ಜನ್ಮಸಾರ್ಥಕತೆಯು । ಸಾಧನ । ವನ್ನು ಕೇಳು ನೀನು" ಎಂದು ಉಪದೇಶ ಮಾಡಿರುವದು. ಇದಕ್ಕೆ ಉದಾಹರಣೆಯಾಗಿ ಶ್ರೀ ಸಮರ್ಥ ರಾಮದಾಸರ ಆಖ್ಯಾನವು ನಿರೂಪಣ ಮಾಡಲಾಗುವದು.

---

## ಆಖ್ಯಾನ

ಕೀ॥ ಜಾಂಬಗಾಂವಿನೊಳು ಕರಣಿಕ ಸತ್ಕುಲ । ಸಂಭವ ಸೂರ್ಯಾಜೀ ಪಂತ ॥ ಸಂಬಿದ ರಾಣಾಬಾಯಿಯೊಡನೆ ಧರೆ । ಯಂ ಬೆಳಗಿರ್ದನು ಗುಣವಂತ ॥

ಈ ದಂಪತಿಗಳಿಗೆ—

ಸಾ॥ ಸೀತಾಪತಿ ಕನಸಿನಲ್ಲಿ ಹೇಳಿದ । ಮಾತಿನಂತೆ ಮಗನಾದ; ॥ ಖ್ಯಾತ ರಾಮನವಮಿಯು ದಿನದಲ್ಲಿಯೆ । ಭೂತಲಕಾಯ್ತಾಮೋದ ॥

ಇಂಥ ಮಕ್ಕಳು ಸುಲಭವಲ್ಲವೆಂದು ಕವಿ ಹೇಳಿರುವದೇನೆಂದರೆ—

ಶ್ಲೋ॥ ಸ್ವಗರ್ಭಶುಕ್ತಿನಿರ್ಭಿನ್ನಂ ಸುವೃತ್ತಂ ಸುತಮೌಕ್ತಿಕಮ್ । ವಂಶ ಶ್ರೀತಿಲಕೀಭೂತಂ ಮಂದಭಾಗ್ಯಸ್ಯ ದುರ್ಲಭಮ್ ॥ —(ಸು)

ಅ॥ ತಮ್ಮ ಬಸಿರೆಂಬ ಕಪ್ಪೇಚಿಪ್ಪಿನಿಂದ ಹೊರಟಂಥ ಮನೆತನದ ಅಭಿಮಾನದೇವತೆಗೆ ತಿಲಕ ಪ್ರಾಯವಾಗಿಯೂ ದುಂಡಗೂ ಅಥವಾ ಸದಾಚಾರವುಳ್ಳವನಾಗಿಯೂ ಇರುವ ಮಗನೆಂಬ ಮುತ್ತು ದುರ್ದೈವಿಗಳಿಗೆ ಸಿಕ್ಕುವದಿಲ್ಲ—

ನಾರಾಯಣನೆಂದು ನಾಮಕರಣಗೊಂಡ ಈ ಮಗು ದೊಡ್ಡದಾಗುತ್ತ ಆಗುತ್ತ—

ದಿಂ॥ ಹುಡುಗರೆಲ್ಲಗುರ್ಗಂ ದಾರಿದೋರ್ವನಾಗಿ । ಜಡಿದು ಹಾರುತ್ತಂ ಮರಕೆ ಮರದಿ ತೂಗಿ ॥ ಬಿಡದೆ ಧುಮ್ಮಿಕ್ಕುತ್ತೆತ್ತರದೊಳು ನಿಂತು । ನುಡಿಯುತಿರ್ದಂ ಗೆಳೆಯರ್ಗೆ ಧೈರ್ಯವಾಂತು ॥

ಈ ಹಾವಳಿಯನ್ನು ತಪ್ಪಿಸುವದಕ್ಕಾಗಿ ಮಗುವನ್ನು ಮಠಕ್ಕೆ ಹಾಕಿದಾಗ—

ಕಂ॥ ಕಲಿತನತಿವೇಗದಿಂ । ದಲಿ ಮಠದುಪಾಧ್ಯಾಯ । ನಲಿ ಹಳ್ಳಿಯೊಳಗೆಲ್ಲ ಕಲಿವನಿತನು; ॥ ನಲವಿಂದ ಧರ್ಮವನು । ಬೆಳೆಯಿಸಿದಸಜ್ಞಾನಿಂ । ತಿಳಿಯುತ್ತ ಧರ್ಮದ ರಹಸ್ಯಗಳನು ॥

ಆಮೇಲೆ ಆವನಿಗೆ ಧರ್ಮದ ಕಡೆಯ ಒಲವು ಹೆಚ್ಚಾದ್ದರಿಂದ ಮನೆಯಿಂದ ತಪ್ಪಿಸಿಕೊಂಡು—

ಶ॥ ಮಾರುತಿಯನು ಕ । ಣ್ಣಾರೆ ಕಂಡು ರಘು । ವೀರನ ನೀ ತೋರೆಂದೆನುತ॥ ವಿಾರಿದ ಪ್ರೇಮದಿ । ಮಾರುತಿಯಡಿಯೊಳು । ದೂಡಿಟ್ಟನು ಕಣ್ಣೀರಿಡುತ॥

ಅವನು ಪ್ರಾರ್ಥಿಸಿದ್ದು—

ಬೇಹಾಗ್—ಆದಿತಾಳ

ಎಲ್ಲಿರುವೆ ತಂದೆ, ಬಾರೊ। ಮಾರುತಿ ॥ ಪ ॥ ಎಲ್ಲೆಲ್ಲಿ ನೋಡಿದರೆ । ಅಲ್ಲಿ ನಿನ್ನ ಕೀರುತಿ; । ಅಲ್ಲಲ್ಲಿ ನೀನಿರುತಿ । ಮಾರುತಿ ॥ ಅ. ಪ ॥ ರಂಗನ ಅರ್ಧಾಂಗಿಗೆ ನೀ। ಉಂಗುರವನಿತ್ತು ವನ । ಭಂಗವ ಗೈದೆಯಲೊ । ಮಾರುತಿ ॥ ೧ ॥ ರಕ್ಕಸರ ನೊಕ್ಕ ಮುರಿ । ದಿಕ್ಕಿ ಲಂಕೆಗೆ ಉರಿ । ಉಕ್ಕಿ ಓಡಾಡಿದೆಲೊ । ಮಾರುತಿ ॥ ೨ ॥ ಶೇಷಗಿರಿವಾಸಗೆ ನೀ । ದಾಸನೆಂದು ನಂಬಿದೆ; ಈ । ದಾಸಗೆ ದಯಮಾಡೊ । ಮಾರುತಿ ॥ ೩ ॥ —(ದಾ)

ಆಗ ಮಾರುತಿಯು ಪ್ರತ್ಯಕ್ಷನಾಗಿ ಶ್ರೀರಾಮಮೂರ್ತಿಯ ದರ್ಶನವನ್ನೂ ಮಾಡಿಸಿ ನಾರಾಯಣನನ್ನು ಧನ್ಯನನ್ನಾಗಿ ಮಾಡಿದಾಗ ಶ್ರೀರಾಮಮೂರ್ತಿಯು ನಾರಾಯಣನಿಗೆ ಹೇಳಿದ್ದು—

ಶ್ಲೋ॥ ಆಕ್ರಾಂತಾಸು ವಸುಂಧರಾಸು ಯವನೈರಾಸೇತುಹೇಮಾಚಲಮ್ । ಏಪಾಂಚ್ಯೇ ಕ್ಷಿತಿಭೃದ್ಗಣೇ ವಿಕರುಣೇ ನಿದ್ರಾತಿ ನಾರಾಯಣೇ ॥ ನಿರ್ವಿಘ್ನಪ್ರಸರೇ ಕಲಾವಪಿ ಬಲಾನ್ನಿಷ್ಕಂಟಕಂ ವೈದಿಕಮ್ । ಪಂಥಾನಂ ಕಿಲ ತತ್ರ ತತ್ರ ಪರಿಪಾತ್ಯೇಕೋ ಹಿ ಲೋಕೋತ್ತರಃ ॥ —(ಸು)

ಅ॥ ಸೇತುವಿನಿಂದ ಹೇಮಾಚಲದವರೆಗೆ ಭೂಮಿಯಲ್ಲಿಲ್ಲ ಯವನರು ತುಂಬಿಕೊಂಡದ್ದರಿಂದಲೂ ರಾಜರೆಲ್ಲ ನಾಶವಾದ್ದರಿಂದಲೂ ದಯೆಯಿಲ್ಲದೆ ನಾರಾಯಣನು ಮಲಗಿರುವದರಿಂದಲೂ ಕಲಿಯುಗಕ್ಕೆ ಎದುರಿಲ್ಲದೆ ಹೋಗಿರುವಾಗ ವೈದಿಕಧರ್ಮವನ್ನು ಯಾವದೋ ಒಂದದೃಷ್ಟವು ಅಲ್ಲಲ್ಲಿ ಕಾದುಕೊಂಡಿದೆ.

ಆ ಧರ್ಮಕ್ಕೆ ಉತ್ತೇಜನವನ್ನು ಕೊಡುತ್ತ ಕಾಲಹರಣ ಮಾಡೆಂದು ಆಜ್ಞೆಯಾಗುತ್ತಿರಲಿತ್ತ ಮನೆಯವರು ಹುಡುಕಿಕೊಂಡು ಬಂದು ನಾರಾಯಣನನ್ನು ಕರೆದುಕೊಂಡು ಹೋಗಿ ಮದುವೆಗೊಡಂಬಡಿಸಿ ಹಸೆಯ ಮೇಲೆ ಕೂಡಿಸಿರುವಾಗ ಪುರೋಹಿತರು 'ಸಾವಧಾನ' ಎನ್ನುತ್ತಲೆ 'ಇಲ್ಲಿರಿ; ಸಾವಧಾನವಾಗಿ ವಿಚಾರಮಾಡಿ ಹೇಳುತ್ತೇ'ನೆಂದು ನಾರಾಯಣನು ಮನಸ್ಸಿನಲ್ಲಿ ವಿಚಾರಮಾಡಿದ್ದು—

ಶ್ಲೋ॥ ಶರಣಂ ನ ಭವತಿ ಜನನೀ, । ನ ಪಿತಾ, ನ ಸುತಾ, ನ ಸೋದರಾ, ನಾನ್ಯೇ; । ಪರಮಂ ಶರಣಮಿದಂ ಸ್ಯಾಚ್ಚರಣಂ ಮಮ ಶಿರಸಿ ದೇಶಿಕನ್ಯಸ್ತಮ್॥ —(ಸ್ವಾ. ನಿ)

ಅ॥ ನನಗೆ ತಾಯಾಗಲಿ ತಂದೆಯಾಗಲಿ ಮಕ್ಕಳಾಗಲಿ ಒಡಹುಟ್ಟಿದವರಾಗಲಿ ಉಳಿದವರಾಗಲಿ ಗತಿಯಾಗಲಾರರು. ಇನ್ನು ತಲೆಯ ಮೇಲೆ ಅಭಯಹಸ್ತವನ್ನಿಟ್ಟ ಗುರುಚರಣವೇ ನನಗೆ ಹೆಚ್ಚಿನ ಗತಿ.

ಗೃಹಸ್ಥಾಶ್ರಮದ ಹುರುಳನ್ನು ನೋಡಿದರೆ—

ಶ್ಲೋ॥ ಕ್ರೋಶಂತಃ ಶಿಶವಃ, ಸವಾರಿ ಸದನಂ, ಪಂಕಾವೃತಂ ಚಾಂಗಣಮ್, । ಶಯ್ಯಾ ದಂಶವತೀ ಚ, ರೂಕ್ಷಮಶನಂ, ಧೂಮೇನ ಪೂರ್ಣಂ ಗೃಹಮ್, ॥ ಭಾರ್ಯಾ ನಿಷ್ಠುರಭಾಷಿಣೀ, ಪ್ರಭುರಪಿ ಕ್ರೋಧೇನ ಪೂರ್ಣಃ ಸದಾ । ಸ್ನಾನಃ ಶೀತಲವಾರಿಣಾ ಹಿ ಸತತಂ ಧಿಗ್ಧಿಗ್ಗೃಹಸ್ಥಾಶ್ರಮಮ್ ! ॥—(ಸು)

ಅ|| ಮಕ್ಕಳು ಅಳುತ್ತಿರುವದು, ಮನೆ ಎಲ್ಲಿಲ್ಲಿ ನೋಡಿದರೂ ನೀರಾಗಿರುವದು, ಅಂಗಳವೆಲ್ಲ ಕೆಸರು, ಹಾಸಿಗೆಯು ತುಂಬ ತಗಣೆ, ಜಿಡ್ಡಿಲ್ಲದೂಟ, ಮನೆತುಂಬ ಹೊಗೆ, ನೋಯುವಂಥ ಮಾತಾಡುವ ಹೆಂಡತಿ, ಯಾವಾಗಲೂ ಸಿಟ್ಟಾಗಿರುವ ಯಜಮಾನ, ಯಾವಾಗಲೂ ತಣ್ಣೀರಸ್ನಾನ, ಛೆ, ಛೆ, ಗೃಹಸ್ಥಾಶ್ರಮದಲ್ಲಿ ಹುರುಳಿಲ್ಲ.

ಇದರ ಮೇಲೆ—

ಶ್ಲೋ|| ಕಾಮ ಏವ ಯಮಃ ಸಾಕ್ಷಾತ್ಕಾಂತಾ ವೈತರಣೀ ನದೀ । ವಿವೇಕಿನಾಂ ಮುಮುಕ್ಷೂಣಾಂ ನಿಲಯಸ್ತು ಯಮಾಲಯಃ ॥ —(ಸ. ವೇ. ಸಿ)

ಅ|| ಕಾಮವೆಂಬುವದೇ ಯಮ ; ಹೆಂಡತಿಯೇ ವೈತರಣೀನದಿ ; ವಿವೇಕಿಗಳಾಗಿ ಮೋಕ್ಷವನ್ನು ಬಯಸುವವರಿಗೆ ಮನೆಯೇ ಯಮಲೋಕ.

ಏಕೆಂದರೆ—

ಶ್ಲೋ|| ರಕ್ತಾ ಹರಂತಿ ಸರ್ವಸ್ವಂ ಪ್ರಾಣಾನಪಿ ವಿರಾಗತಃ । ಅಹೋ ! ರಾಗವಿರಾಗಾಭ್ಯಾಂ ಕಷ್ಟಕಷ್ಟಾ ಹಿ ಯೋಷಿತಃ ॥ —(ಸು)

ಅ|| ಅವರು ನಮ್ಮ ಮೇಲೆ ಪ್ರೇಮವನ್ನು ಮಾಡಿದರೆ ಸರ್ವಸ್ವವನ್ನೂ ವಶಮಾಡಿಕೊಳ್ಳುತ್ತಾರೆ. ಅಪ್ರೀತಿಯನ್ನು ಮಾಡಿದರೆ ನಮ್ಮ ಪ್ರಾಣಗಳನ್ನೆ ತೆಗೆದುಕೊಳ್ಳುತ್ತಾರೆ. ಹೀಗೆ ಸ್ತ್ರೀಯರು ಎರಡು ರೀತಿಯಿಂದಲೂ ಕಷ್ಟ.

ಹೀಗೆಂದು ಯೋಚನೆಮಾಡಿ—

ಚೌ|| ವಿಷದೊಡನೆ ಕಲೆತನ್ನವನು ಕೆಲ–ಕೆಸೆದು ಕೈತೊಳೆವಂದದಿ । ಎಸೆದ ಬಲೆಯನು ಕಂಡು ವಿಹಂಗಳ ಪ್ರಸರ ತಲಕೆಳೆವಂದದಿ ॥ ಹಸೆಯ ಜಗುಲಿಯ ನಿಳಿದು ಜನಗಳ–ಘಸಣೆಗೊಳಪಡದಂದದಿ । ಸುಸಿದು ತೆರಳಿದನಾಗ ಮುಂದಿನ–ದೆಸೆಗೆ ತಾ ಹಾಯ್ವಂದದಿ ॥

ಇದಕ್ಕೆ ತೀವ್ರವೈರಾಗ್ಯವೆಂದು ಹೆಸರು. ಇದರ ಲಕ್ಷಣವೇನೆಂದರೆ—

ಶ್ಲೋ|| ಕಾಕಸ್ಯ ವಿಷ್ಟಾವದಸಹ್ಯಬುದ್ಧಿ । ಭೋಗ್ಯೇಷು ಸಾ ತೀವ್ರವಿರಕ್ತಿರಿಷ್ಯತೇ ; ॥ ವಿರಕ್ತಿತೀವ್ರತ್ವನಿದಾನಮಾಹು । ಭೋಗ್ಯೇಷು ದೋಷೇಕ್ಷಣಮೇವ ಸಂತಃ ॥ —(ಸ. ವೇ. ಸಿ)

ಅ|| ಕಾಗೆಯ ಹೇಸಿಕೆಯಂತೆ ಅಸಹ್ಯಬುದ್ಧಿಯಿಂದ ಭೋಗ್ಯವಸ್ತುಗಳನ್ನು ಬಿಡುವದೇ ತೀವ್ರವಿರಕ್ತಿ. ತೀವ್ರವೈರಾಗ್ಯಕ್ಕೆ ಭೋಗ್ಯವಸ್ತುಗಳನ್ನು ದೋಷದೃಷ್ಟಿಯಿಂದ ನೋಡುವದೇ ಸಾಧನ.

ನಾರಾಯಣನ ಮನಸ್ಸು ಸ್ವಭಾವವಾಗಿ ಈ ರೀತಿಯಲ್ಲಿ ಪ್ರವರ್ತಿಸಿದೆ—

ಶ್ಲೋ|| ಅಲಿರನುಸರತಿ ಪರಿಮಳಮ್ ; । ಲಕ್ಷ್ಮೀರನುಸರತಿ ನಯಗುಣಸಮೃದ್ಧಿಮ್ ; ॥ ನಿಮ್ನಮನುಸರತಿ ಸಲಿಲಮ್ ; । ವಿಧಿಲಿಖಿತಂ ಬುದ್ಧಿರನುಸರತಿ ॥ —(ಸು)

ಅ|| ಭ್ರಮರವು ಸುವಾಸನೆಯನ್ನು ಹಿಂಬಾಲಿಸುತ್ತದೆ. ಲಕ್ಷ್ಮಿಯು ಹೆಚ್ಚು ನಯಗುಣವನ್ನು ಹಿಂಬಾಲಿಸುತ್ತಾಳೆ. ನೀರು ತಗ್ಗನ್ನು ಅನುಸರಿಸುತ್ತದೆ. ಬುದ್ಧಿಯು ಅದೃಷ್ಟವನ್ನನುಸರಿಸುತ್ತದೆ.

ಇದರಂತೆ ಹೊರಬಿದ್ದ ಇನ್ನೊಬ್ಬ ಭಕ್ತನು ತನ್ನ ಮನಸ್ಸನ್ನು ಬಿಚ್ಚಿ ಹೇಳಿರುವದೇನೆಂದರೆ—

ತ್ರಿ॥ ಹಸಿವು ತೃಷೆ ವಿಷಯುವ ಹೊಸೆದು ಭಸ್ಮವ ಮಾಡಿ । ಕಿಸುಕುಳದ ಗಂಟ ಕಡೆಗೊದ್ದು ॥ ಕಿಸುಕುಳದ ಗಂಟ ಕಡೆಗೊದ್ದು ಸಂಸಾರ । ಹಸಗೆಟ್ಟಿತೆಂದು ನಗುತಿರ್ದೆ ॥ —(ನಾ. ತ್ರಿ)

ಮನೇ ಬಿಟ್ಟು ಹೊರಬಿದ್ದ ಮೇಲೆ ಇನ್ನಾರು ಗತಿಯೆಂದರೆ—

ಕಂ॥ ವಾಸರವಲ್ಲಭಮಂಡಲ । ವಾಸರತಂ ಲಕುಮಿವೆರಸಿ ಪಾಲ್ಗಡಲೊಳ್ಪೂ ॥ ವಾಸರೆವಾವೆನೆ ಬಿನದಿಸು । ವಾ ಸರಸಿಜನಾಭನೆಮ್ಮನೋವುಗೆ ನಿಚ್ಚಂ ॥ —(ಸೂ. ಶಾ)

ಟಿ॥ ಪೂ+ವಾಸು+ಅರವಾವು+ಎನೆ= ಹಾವಿನರಸನಾದ ಆದಿಶೇಷನು ಹೂವಿನ ಹಾಸಿಗೆಯಾಗಿರಲು

ಹೀಗೆ ಭಗವಂತನನ್ನು ನಂಬಿದ ನಾರಾಯಣನು ಮುಂದೆ—

ಭೋ॥ ಹರಿವ ಗೋದಾವರಿಯ ನದಿಯ । ನೆರೆಯ ತಾಕ್ಲಿಮೂರ ಒಳಿಯೊ । ಳಿರುತ ನೀರಿನಲ್ಲಿ ನಿಂತು ತಪವ ಮಾಡುತ ॥ ಭರದಿ ಪಿವಾಸ ಕಡಿತದಿಂದ। ಕರೆಗಳಾಗೆ ತೊಡೆಯ ವರೆಗೆ । ನರರು ನೋಡಿ ನಿಜದಿ ರಾಮದಾಸನೆಂದರು ॥

ಮಾಧುಕರಿಗೆ ಹೋದಾಗ ಜನರು ತನ್ನನ್ನು ರಾಮದಾಸರೆಂದು ಕರೆದದ್ದನ್ನು ಸಾರ್ಥಕಗೊಳಿಸಿ ಅವನು ಅವರನ್ನು ಕುರಿತು ಉಪದೇಶಿಸಿದ್ದು—

ಶಂಕರಾಭರಣ—ಅಟತಾಳ

ರಾಮ ರಾಮೆನ್ನಿರೋ । ಇಂಥ । ಸ್ವಾಮಿಯ ನಾಮವ ಮರೆಯದಿರೊ ॥ ಪ ॥ ತುಂಬಿದ ಪಟ್ಟಣಕೊಂಬತ್ತು ಬಾಗಿಲು ; । ಸಂಭ್ರಮದರಸುಗಳೈದು ಮಂದಿ ; ॥ ಡಂಭಕತನದಿಂದ ಕಾಯುವ ಜೀವವ । ನಂಬಿ ನೆಚ್ಚಿ ನೀವು ಕೆಡಬೇಡಿರೊ ॥ ೧ ॥ ನೆಲೆಯು ಇಲ್ಲದ ಕಾಯ, ಎಲುಮಿನ ಹಂದರ ; । ಬಲಿದು ಸುತ್ತಿದ ಚರ್ಮದ ಹೊದಿಕೆ ; ॥ ಮಲಮೂತ್ರಂಗಳು ಕೀವೂ ಕ್ರಿಮಿಗಳು । ಹೊಲಸು ತೊಗಲ ಮೆಚ್ಚಿ ಕೆಡಬೇಡಿರೊ ॥ ೨ ॥ ಹರಬ್ರಹ್ಮಸುರರಿಂದ ವಂದಿತನಾಗಿಪ್ಪ । ಹರಿಸರ್ವೋತ್ತಮನೆಂದೆನ್ನಿರೋ ॥ ಪುರಂದರವಿಠಲನ ಚರಣವ ಭಜಿಸಿರೊ । ದುರಿತಭಯಗಳೆಲ್ಲ ಪರಿಹರವಪ್ಪವು ॥ ೩ ॥ —(ದಾ)

ಆಗ ರಾಮಚಂದ್ರನು ದರ್ಶನವನ್ನು ಕೊಟ್ಟು ಇನ್ನು ತಪಶ್ಚರ್ಯೆಯನ್ನು ನಿಲ್ಲಿಸಿ ಧರ್ಮಪ್ರಸಾರದ ಉದ್ಯೋಗಕ್ಕೆ ಹೊರಡೆಂದು ಹೇಳುತ್ತಲೆ ರಾಮದಾಸರು ಮುಂದೆ ದಾರಿಯನ್ನು ಹಿಡಿದು ಹೋಗುತ್ತಿರುವಾಗ ಅವರ ಮಹಿಮೆ ಮೊದಲನೆ ಸಲ ಪ್ರಕಟವಾದದ್ದೇನೆಂದರೆ—

ಕೀ॥ ಪತಿಯೊಡನಗ್ನಿಯೊಳುರಿಯಲು ಬರ್ಪಾ । ಸತಿಯುಪರಡಿಗೆ ತಲೆಯ ಬಾಗೆ ॥ ಕ್ಷಿತಿಯೊಳಷ್ಟಪುತ್ರರ ಪಡೆಯೆಂದರು ; । ಸತಿ ಕೇಳುತ್ತಿದ ಬೆರಗಾಗೆ ॥

ಬೆರಗಾದ ಕಾರಣವನ್ನು ತಿಳಿದು ತಮ್ಮ ಮಾತು ಸುಳ್ಳಾಗಬಾರದೆಂದು ಅವರು ಶವವನ್ನು ನೋಡುತ್ತಲೆ ಅದಕ್ಕೆ ಮತ್ತೆ ಜೀವಕಳೆ ಬಂದದ್ದನ್ನು ನೋಡಿ ಜನರೆಲ್ಲರೂ ಉತ್ಸಾಹಗೊಂಡು ಅವರನ್ನು ಅಂದಿನಿಂದ ಸಮರ್ಥರಾಮದಾಸಸ್ವಾಮಿಗಳೆಂದು ಕರೆಯಲಾರಂಭಿಸಿದರು. ಇತ್ತ—

ಸಾ॥ ಹಿರಿಯ ಮಗನನುದ್ಧವನೆಂಬುವನನು | ಪರಮಾದರದಿಂ ತಂದು | ಗುರುಪದಕೊಪ್ಪಿಸಿ ಸೇವೆಗೆ ಬಿಟ್ಟಳು | ಹರುಷದಿ ಸತಿ ತಾನಂದು ॥

ಆ ಮನೆತನವು ಈಗ ಅಷ್ಟಪುತ್ರೆ ಎಂಬ ಅಡ್ಡಹೆಸರಿನಿಂದ ಪ್ರಸಿದ್ಧವಾಗಿದೆ. ದೊಡ್ಡವರ ಬಾಯಿಂದ ಬಂದ ಮಾತು ನಡೆಯುವ ವಿಷಯದಲ್ಲಿ ಪ್ರಾಜ್ಞರು ಹೇಳಿರುವದೇನೆಂದರೆ—

ಶ್ಲೋ॥ ಲೌಕಿಕಾನಾಂ ಹಿ ಸಾಧೂನಾಮರ್ಥಂ ವಾಗನುವರ್ತತೇ | ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ ॥ —(ಸು)

ಅ॥ ಲೌಕಿಕರಲ್ಲಿ ಒಳ್ಳೆಯವರು ನಡೆದದ್ದನ್ನು ಆಡುತ್ತಾರೆ; ಶ್ರೇಷ್ಠರಾದ ಋಷಿಗಳು ಆಡಿದ್ದು ನಡೆವಳಿಕೆಗೆ ಬರುತ್ತದೆ.

ಹೀಗೆ ಅವರು ತಮ್ಮ ಮಹಿಮೆಯಿಂದ ಹೆಸರುಗೊಂಡದ್ದನ್ನು ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ಅಕಿಂಚನವರೇಣ್ಯೋಽಪಿ ಸಮರ್ಥಪದವೀಂ ಗತಃ । ದಾಸೋಽಪಿ ಯಃ ಕಿಲ ಸ್ವಾಮೀ ಸ ಸಾಧುಃ ಕೋಽಪಿ ರಾಜತೇ ॥ —(ಸು. ಲಾ)

ಅ॥ ಬರಿಗಯ್ಯವರಲ್ಲೆಲ್ಲ ಶ್ರೇಷ್ಠರಾಗಿದ್ದರೂ ಸಮರ್ಥರೆಂಬ ಪದವಿಯನ್ನು ಹೊಂದಿ ದಾಸರಾಗಿದ್ದೂ ಕೂಡ ಸ್ವಾಮಿಯೆಂದೆನಿಸಿಕೊಂಡಂಥ ಸಾಧುಗಳು ಅಸಾಮಾನ್ಯರಾಗಿದ್ದಾರೆ.

ಅಲ್ಲಿಂದ ಮುಂದೆ ಅವರು—

ಸಾಂ॥ ಇರಿಸುತುದ್ಧವನನು ತಾಕ್ಲಿಯೂರಿನೊಳಿದ್ದ | ವರಮಾರುತಿಯ ಪೂಜೆಗಾಗಿ ॥ ಭರದಿಂದ ದೇಶಸಂಚಾರಕೆ ಹೊರಟರು | ನರರನುದ್ಧರಿಪುದಕಾಗಿ ॥

ದೇಶಸಂಚಾರದ ಪ್ರಯತ್ನವನ್ನು ಕುರಿತು ಒಬ್ಬ ಕವಿ ಹೇಳಿರುವದೇನೆಂದರೆ—

ಶ್ಲೋ॥ ಆಕಿಂಚನ್ಯಾದತಿಪರಿಚಯಾಜ್ಜಾಯಯೋಪೇಕ್ಷ್ಯಮಾಣೋ | ಭೂಪಾಲಾನಾಮನನುಸರಣಾದ್ವಿಭ್ಯದೇವಾಖಿಲೇಭ್ಯಃ ॥ ಗೇಹೇ ತಿಷ್ಠನ್ಕುಮತಿರಲಸಃ ಕೂಪಕೂರ್ಮೈಕಸಧರ್ಮಾ । ಕಿಂ ಜಾನೀತೇ ಭುವನಚರಿತಂ? ಕಿಂ ಸುಖಂ ಚೋಪಭುಙ್ಕ್ತೇ? ॥ —(ಸು)

ಅ॥ ಬಡತನದಿಂದಲೂ ಸಲಿಗೆಯಿಂದಲೂ ಹೆಂಡತಿಯ ಉಪೇಕ್ಷೆಗೆ ಪಾತ್ರನಾಗಿ ರಾಜರನ್ನು ಅನುಸರಿಸಲಾಗದ ಕಾರಣ ಎಲ್ಲರಿಗೂ ಹೆದರುತ್ತ ಕೂಪಕೂರ್ಮದಂತೆ ಮನೆಯಲ್ಲಿಯೇ ಇರುವ ಸೋಮಾರಿಯು ಜಗತ್ತಿನ ಚರಿತ್ರವನ್ನೇನು ತಿಳಿದಾನು? ಏನು ಸುಖವನ್ನು ಪಟ್ಟಾನು?

ಶ್ರೀ ರಾಮದಾಸಸ್ವಾಮಿಗಳು ಅನೇಕತೀರ್ಥಗಳನ್ನು ಸುತ್ತಿಕೊಂಡು ಮಹಾರಾಷ್ಟ್ರದೇಶಕ್ಕೆ ಬರುವ ಹೊತ್ತಿಗೆ ಇಲ್ಲಿನ ಸ್ಥಿತಿ ಹೇಗಿತ್ತೆಂದರೆ—

ದಿಂ॥ ಯವನರಾದರವೇ ಭಾಗ್ಯವೆಂಬುದಾಗಿ । ಬವರದೊಳ್ಮೇಣ್ತ್ರಾಮ್ಮವರ ತಾಪ ತಾಗಿ | ಬುವಿಯನೆಲ್ಲಂ ಕಷ್ಟಮಕ್ಕೆ ಗುರಿಯ ಮಾಡಿ । ಸವೆಯುತಿರ್ದತ್ತು ಜನತೆ ಹಾನಿಗೂಡಿ ।

ಇದರಿಂದ ಮರುಕಗೊಂಡ ರಾಮದಾಸಸ್ವಾಮಿಗಳು ಅದನ್ನು ಸರಿಮಾಡುವದರ ಕಡೆಗೆ ತಿರುಗುವ ಮೊದಲು ತಾಯ ದರ್ಶನವನ್ನು ಮಾಡಬೇಕೆಂದು ಮನೆಗೆ ಬಂದಿದ್ದಾರೆ. ಏಕೆಂದರೆ—

ಭಾ|| ಅರಸ ಕೇಳ್ಳೈ ಜನಕಜನನೀ | ಗುರುಗಳೇ ಎಗೆ ವಂದನೀಯರು; | ಪಿರಿದೆನಿಸುತಿಹ ದೇವತಾತ್ರಯವಧಿಕವೆಲ್ಲರಿಗೆ; || ಪರವೆನಿಪುದಾವಮ್ನಾಯ, ವೈಶ್ವಾ | ನರನಧಿಕವಿದರಿಂದ, ಜನನಿಯೆ | ನರಗೆ ಗೌರವದಿಂದ ವೆಗ್ಗಳವಹಳು ಸತ್ಯವಿದು || —(ಸು)

ಶ್ರೀಸಮರ್ಥರು ಮಗನಿಗಾಗಿ ದುಃಖಪಡುತ್ತಿದ್ದ ತಾಯಿ ಬಳಿಗೆ ಬಂದು "ಜಯಜಯ ರಘುವೀರ ಸಮರ್ಥ" ಎನ್ನುತ್ತಲಿ ತಾಯಿಯು ಅವನನ್ನು ಯಾವನೋ ಒಬ್ಬ ಗೋಸಾವಿ ಯೆಂದು ತಿಳಿದು ಸೊಸೆಯನ್ನು ಕರೆದು ಭಿಕ್ಷೆಯನ್ನು ಹಾಕಹೇಳಿದಾಗ ಸಮರ್ಥರು ಹೇಳಿದ್ದು—

ಸಾ|| ಬರಿಯ ಕಾಳುಕಡ್ಡಿಯ ಭಿಕ್ಷಕೆ ನಾ | ಸೆರಗೊಡ್ಡಿರುವವನಲ್ಲ; || ಧರೆಯುದ್ಧಾರಕೆ ಹರಸೌ ನಿನ್ನಯ | ತರಳ ನಾನು; ಬೇರಲ್ಲ ||

ಎಂದು ಆಕೆಯನ್ನು ಸಂತಯಿಸಿ ಅಲ್ಲಿಂದ ಹೊರಬೀಳುತ್ತಲೆ ಒಬ್ಬ ಶಿಷ್ಯನು ಶರಣು ಬಂದದ್ದು—

ಭಾ|| ಗರುಡಮಂತ್ರದೊಳಲ್ಲದುರಗನ | ಗರಳಭಯವದು ಪರಿಯದಂದದಿ | ಗುರುವೆ, ನಿಮ್ಮಯ ಚರಣಸೇವೆಯೊಳಲ್ಲದಾರಿಗೆಯು || ಪರಭವದ ಭಯವೆಂಬು ದೆಂದಿಗು | ಪರಿಯದದರಿಂ ಪಾದಭೃತ್ಯರ | ಚರಣಸೇವಕನೆನಿಸಿ ಪಾಲಿಪುದೆಮ್ಮ ನಟವೀಶ || —(ಗು. ಭ. ಸಾ)

ಸಮರ್ಥರು ಅವನಿಗೆ ಕಲ್ಯಾಣನೆಂದು ಹೆಸರಿಟ್ಟು ಶಿಷ್ಯನನ್ನು ಮಾಡಿಕೊಂಡದ್ದನ್ನು ಕವಿ ವರ್ಣಿಸಿರುವದೇನೆಂದರೆ—

ಶ್ಲೋ|| ರಾಮದಾಸಪದಾಂಭೋಜರಜಃಸ್ಪರ್ಶೋ ವಿರಾಜತೇ | ಯಃ ಕುಶೀಲಜನಸ್ಯಾಸ್ಯ ಕಲ್ಯಾಣಾಯ ಪ್ರಕಲ್ಪತೇ || —(ಸು. ಲಾ)

ಅ|| (೧) ರಾಮದಾಸರ ಚರಣಧೂಲಿ ಧನ್ಯವಾದದ್ದು. ಏಕೆಂದರೆ ಕುಶೀಲರು ಕೂಡ ಕಲ್ಯಾಣರಾಗುತ್ತಾರೆ. (೨) ರಾಮದಾಸರ ಪಾದಧೂಲಿಯೆಂಬುವದು ಒಂದು ಸ್ಪರ್ಶಮಣಿಯಾಗಿ ಶೋಭಿಸುತ್ತಿದೆ. ಹೇಗೆಂದರೆ (ಕುಶೀಲ) ಕಬ್ಬಿಣದ ತುಂಡಿನಂಥದ್ದನ್ನು (ಕಲ್ಯಾಣ) ಬಂಗಾರವಾಗಿ ಮಾಡುತ್ತದೆ.

ಆಮೇಲೆ ಅಕ್ಕಾ ಎಂಬಾಕೆ ಶರಣು ಬಂದದ್ದು—

ಭಾ|| ಒಲಿದು ಬಂದಬುಜಾಕ್ಷಿ ನಲಿದಿನಿ | ಗಲೆಯ ನುಡಿಗಳನಾಡೆ ಸಂತಸ | ದಳೆದು ಲೋಲಭುಜಂಗ ಕೇಳುವ ತೆರದಿ ಕಿವಿಗೊಟ್ಟು || ಸುಲಭಗುರುವರ, ನಿಮ್ಮ ಮಹಿಮಾ | ವಳಿಯ ಮನವೆಳಸುತಲಿ ಕಿವಿ ಮುಂ | ಗೊಳಿಸಿ ಕೇಳ್ವಂತೆ ಸಗಿ ಪಾಲಿಪುದೆಮ್ಮ ನಟವೀಶ || —(ಗು. ಭ. ಸಾ)

ಆಕೆಯ ಶಿಷ್ಯತ್ವವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಶ್ಲೋ|| ಅಕಾಮತಾತ್ಯುತ್ತಮೇತಿ ಕೃತ್ವಾ ಚೇದಿಷ್ಯತೇ ತ್ವಯಾ | ಶ್ರೀರಾಮದಾಸಂ ಶರಣಂ ವ್ರಜ ತತ್ರಾಸ್ತ್ಯಕಾಮತಾ || —(ಸು. ಲಾ)

ಅ|| (೧) (ಅ + ಕಾಮತಾ) ಬಯಕೆ ಇಲ್ಲದಿರುವಿಕೆಯು ಉತ್ತಮವೆಂದು ನೀನು ತಿಳಿಯುವದಾದರೆ ರಾಮದಾಸರಿಗೆ ಶರಣು ಹೋಗು. ಅಲ್ಲಿ ನಿರಿಚ್ಛೆಯನ್ನು ನೋಡುವದಕ್ಕೆ ಸಿಕ್ಕುತ್ತದೆ.

(೨.) (ಅಕಾ+ಮತಾ) ಅಕ್ಕಮ್ಮ ತಾಯಿಯು ಎಲ್ಲರಿಗೂ ಪೂಜ್ಯಳೆಂದು ನೀನು ತಿಳಿದರೆ ರಾಮ ದಾಸಸ್ವಾಮಿಗಳ ಬಳಿಗೆ ಹೋಗು. ಅಕ್ಕಮ್ಮ ತಾಯಿಯು ಅಲ್ಲಿದ್ದಾಳೆ.

ಈ ಪ್ರಕಾರವಾಗಿ ಅನೇಕ ಶಿಷ್ಯರಿಂದ ಕೂಡಿ ಸಂಚಾರಮಾಡುತ್ತ—

ಕಂ|| ಮನಸಿಗುಪದೇಶಗಳ | ನನುಗೊಳಿಸಿ ಶಿಷ್ಯರನು | ಜನರನುದ್ಧರಿಸೆ ತಕ್ಕವರ ಮಾಡಿ || ಎಣಿಸೆ ನೂರಾರುಮಠ | ವನು ಗೈದು ಹನ್ನೊಂದು | ಹನು ಮತ್ಪ್ರತಿಷ್ಠೆಯಾಗಿಸಿದನಾಗ ||

ಇದಲ್ಲದೆ ಚಾಫಳವೆಂಬ ಊರಲ್ಲಿ ಶ್ರೀರಾಮಮೂರ್ತಿಯನ್ನು ಸ್ಥಾಪಿಸಿ ಕೊಂಡಾಡಿದ್ದು—

ಚೂ|| ಜಯಜಯ ಜಗನ್ನಾಥ ಜನ್ಮರಹಿತ, ಭವದಿ-ಭಯಗೊಂಡವರನು ಪೊರೆವಾತ, ಸಿನ್ನ-ದಯೆ ಬರಲು ಪಾಪಕೆ ವಿಘಾತ, ದುರಿತ-ಚಯವಳಿದ ಕುಲದಿ ಸಂಜಾತ, ವಿನಯ-ನಯಗುಣಗಳಿಂದ ನೀಂ ಪೂತ, ಬರಿಯ-ಬಯಲ ಮಾತಿಲ್ಲ ದಿಹ ದಾತ, ಕಡಲ-ಶಯನನೇ ನೀನ್ಯೆ ವಿಧಾತ, ದಯಾ-ಮಯ ನೀನು ಕೇಳೊಂದು ಮಾತ | ಜನರ ಮಾನಸವ ನೀ ತಿದ್ದು, ಅವರ-ನೆನಹಿನೊಳಗೆಲ್ಲ ನೀನಿದ್ದು, ಘನತೆ-ಯನು ಕೊಟ್ಟು ಸೌಖ್ಯದೊಳಗದ್ದು, ಅಡಗೆ-ತನುವೆ ತಾನೆಂದೆಂಬ ಸದ್ದು, ಕೆಟ್ಟ -ಹಣದ ಬಯಕೆಗೆ ನೀನೆ ಮದ್ದು | ನೀನಲ್ಲದಿಲ್ಲ ಗತಿ ಜಗಕೆ, ಮನುಜ-ತಾನೆಷ್ಟ ರವನು ತಡೆವುದಕೆ, ಬರುವ-ಹಾನಿವೃದ್ಧಿಗಳ ಬಹುಭರಕೆ, ದುರಭಿ-ಮಾನವನು ಹಿಂದಟ್ಟುವದಕೆ, ತನ್ನ ಜ್ಞಾನವನು ತಾನು ಪಡೆವುದಕೆ, ದೇವ-ನೀನೆ ಗತಿಯೆಮ್ಮ ಪೊರೆವುದಕೆ ||

ಇತ್ತ ಏನಾಯಿತೆಂದರೆ—

ಕೀ|| ಶಿವರಾಯನು ಕನಸಿನೊಳು ಸಮರ್ಥರ | ನೆವೆಯಿಕ್ಕದೆ ನೋಡು ತ್ತಿದ್ದು || ಅವರ ಬಳಿಗೆ ಹೊರಡುವ ಹೊತ್ತಿಗೆ ಬಂ | ತವರ ಶಿಷ್ಯರೆಂಬರ ಸದ್ದು||

ಧರ್ಮವನ್ನೂ ದೇಶವನ್ನೂ ಉದ್ಧಾರಮಾಡುವದಕ್ಕೆ ದೀಕ್ಷೆಯನ್ನು ವಹಿಸೆಂದು ಬರೆದಿದ್ದ ಆಜ್ಞಾಪತ್ರವನ್ನು ನೋಡಿ ಅದನ್ನು ತಲೆಯ ಮೇಲಿಟ್ಟುಕೊಂಡು ಒಡನೆ ಅವರ ಬಳಿಗೆ ಹೋಗಿ ಅವರ ಪಾದಕ್ಕೆ ಕನಕಾಭಿಷೇಕ ಮಾಡಲು ಸಮರ್ಥರು—

ಸಾ|| ಕನಕವ ಚೆಲ್ಲುತ ದನಗಾವವರಿಗೆ | ತನಗೆರಗಿದ ಶಿವನೃಪಗೆ || ಅನು ವಿಂ ಮಣ್ಣನು ಲದ್ದಿಯನೂ ಕ | ಲ್ಲನೂ ಪ್ರಸಾದವನವಗೆ ||

ಅವನು ಮಹಾಪ್ರಸಾದವೆಂದು ಮನೆಗೆ ಬಂದು ಅದರ ಅರ್ಥವನ್ನು ಕುರಿತು ತಿಳಿದವರೊಡನೆ ವಿಚಾರಮಾಡಿದಾಗ ಅವರು ಹೇಳಿದ್ದು—

ಕಂ|| ಧರೆಯಾಧಿಪತ್ಯವನು | ದೊರೆಯ ಗೈವುದು ಮಣ್ಣು ; | ನೆರೆ ಕಲ್ಲು ಕೋಟೆಗಳ ದೊರಕಿಸುವದು ; || ಅರಿಯೆ ಲದ್ದಿಯ ಫಲವು | ತುರಗದೇಳಿಗೆ ಯಿಂತು | ಗುರುವನುಗ್ರಹದಿಂದ ಸಾಧ್ಯವಹುದು ||

ಈ ಅನುಗ್ರಹದಿಂದಲೇ ಶಿವಾಜಿಯು ಮಹಾರಾಷ್ಟ್ರರಾಜ್ಯವನ್ನು ಸ್ಥಾಪಿಸಿ ಗುರುಗಳು ತನ್ನ ಸಮೀಪದಲ್ಲಿಯೇ ಇರಬೇಕೆಂದು ಅವರನ್ನು ತನ್ನ ಸಮೀಪದಲ್ಲಿದ್ದ ಪರಲಿ ಎಂಬ ಗ್ರಾಮ

ದಲ್ಲಿಟ್ಟುಕೊಳ್ಳಲಾಗ ಅವರ ಬಳಿಗೆ ಬರುತ್ತಿದ್ದ ಸಾಧುಸಮೂಹದಿಂದ ಅದು ಸಜ್ಜನಘಡವೆಂದೆನಿಸಿಕೊಂಡಿತು. ಈ ವಿಷಯದಲ್ಲಿ ಒಬ್ಬ ಕವಿ ಹೇಳಿರುವದೇನೆಂದರೆ—

ಶ್ಲೋ॥ ಯೋ ಹಿ ಶ್ರೀರಾಮದಾಸಃ ಸ್ಯಾತ್ಪರಿತ್ಯಜ್ಯ ಶ್ರಿಯಂ ಸ್ತ್ರಿಯಮ್ ।
ಅಸೌ ನ ಪರಲೀನಃ ಸ್ಯಾದಿತಿ ಕಃ ಸಜ್ಜನೋ ವದೇತ್ ॥ —(ಸು. ಲಾ)

ಅ॥ (೧) ಹಣವನ್ನೂ ಹೆಣ್ಣನ್ನೂ ಬಿಟ್ಟು ರಾಮನಿಗೆ ದಾಸನಾದವನು (ಪರಲೀನ) ಪರಬ್ರಹ್ಮನಲ್ಲಿ ಲೀನನಲ್ಲವೆಂದು ಯಾವ ಸಜ್ಜನರು ಹೇಳುತ್ತಾರೆ? (೨) (ಪರಲೀನ) ಪರಲಿ ಎಂಬ ಗ್ರಾಮದವನಲ್ಲವೆಂದು ಯಾರು ಹೇಳುತ್ತಾರೆ?

ಸಮರ್ಥರು ಶಿವಾಜಿಯು ಬಳಿಯಲ್ಲಿದ್ದು ಅವನನ್ನು ತಿದ್ದುತ್ತಿದ್ದ ಪದ್ಧತಿಗೆ ಒಂದು ನಿದರ್ಶನವೇನೆಂದರೆ—

ಕಂ॥ ತಾನು ಕೊಡುವನ್ನದಿಂ । ದೀಸರೆಷ್ಟೋ ಮಂದಿ । ಪ್ರಾಣವನು ಹೊರೆವರೆಂದಿರಲು ಶಿವನು ॥ ನೀನಿಲ್ಲಿ ಕಲ್ಲೊಳಗೆ । ಕಾಣುವಾ ಕಪ್ಪೆಯನು । ಮಾಣದೇ ಪೊರೆವನೇ? ಪೇಳೆಂದರು ॥

ಹೀಗೆ ಅವನ ದುರಭಿಮಾನವನ್ನು ಬಿಡಿಸಿ ಉಪದೇಶಿಸಿದ್ದು—

ಕಾಂಬೋದಿ—ಝಂಪೆ

ಈ ಸಿರಿಯ ನಂಬಿ ಹಿಗ್ಗಲು ಬೇಡ ಮನವೆ ॥ ಪ ॥ ವಾಸುದೇವನ ಭಜಿಸೊ ಒರಟು ಜೀವನವೆ ॥ ಅ. ಪ ॥ ನೆಂಟರೂರಿಗೆ ಹೋಗಿ ನಾಲ್ಕು ದಿನಪದ್ದರೆ । ಎಂಟು ದಿನದಾಯಾಸ ಅಟ್ಟಬಹುದೊ; ॥ ಉಂಟು ಸೌಭಾಗ್ಯವೆಂದೆಂಬುದನು ಬಿಟ್ಟು ವೈ । ಕುಂಠವಾಸಿಯ ಭಜಿಸೊ ತುಂಟ ಜೀವನವೆ ॥ ೧ ॥ ಮಡದಿ ಮಕ್ಕಳುಯೆಂಬ ಮಾಯಾಸಂಸಾರಕ್ಕೆ । ಸಡಗರವ ತಾ ಗೊಂಡು ಭ್ರಮಿಸಲೇಕೆ? ॥ ಬಿಡದೆ ಯಮನಾಳುಗಳು ಬಾರೆಂದು ಎಳೆವಾಗ ಮಡದಿಮಕ್ಕಳು ತೊಲಗಿಸುವರೊ ಮನವೆ ॥ ೨ ॥ ಇಷ್ಟಸಂಪತ್ತನ್ನು ಬಡವರಾ ಕರತಂದು । ಕೊಟ್ಟು ಮಾಡಿದ ಪುಣ್ಯಫಲ ತನ್ನದೊ; ॥ ಸೃಷ್ಟಿಯೊಳು ಕಾಗಿನೆಲೆಯಾದಿ ಕೇಶವನಂಘ್ರಿ । ಮುಟ್ಟಿ ಮನದಲಿ ಭಜಿಸೊ ಭ್ರಷ್ಟಜೀವನವೇ ॥ ೩ ॥ —(ದಾ)

ಹೀಗೆ ಅವರ ಉಪದೇಶಗಳನ್ನು ಕೇಳುತ್ತ ಶಿವಾಜಿಯು ಅವರನ್ನು ಸತ್ಕರಿಸುತ್ತಿದ್ದದ್ದನ್ನು ಕುರಿತು ಒಬ್ಬ ಕವಿ ಬರೆದಿರುವದೇನೆಂದರೆ—

ಶ್ಲೋ॥ ಯೋ ರಾಮದಾಸಃ ಸ್ಯಾತ್ತಸ್ಯ ಕಲ್ಯಾಣಸ್ಥಿತಿರಾಲಯೇ । ಸಭಾಜಯತಿ ತಂ ಪ್ರೇಮ್ಣಾ ದುರ್ಗಾಧೀಶಃ ಸದಾ ಶಿವಃ ॥ —(ಸು ಲಾ)

ಅ॥ (೧) ರಾಮನ ದಾಸರ ಮನೆಯಲ್ಲಿ ಯಾವಾಗಲೂ ಕಲ್ಯಾಣವಿರುತ್ತದೆ. ಅವರನ್ನು ಪಾರ್ವತೀ ಪತಿಯಾದ ಶಿವನು ಯಾವಾಗಲೂ ಗೌರವಿಸುತ್ತಿರುವನು (೨) ರಾಮದಾಸರ ಬಳಿಯಲ್ಲಿ ಕಲ್ಯಾಣನೆಂಬ ಶಿಷ್ಯನಿರುವನು. ಅನೇಕ ಕೋಟೆಗಳ ಒಡೆಯನಾದ ಶಿವಾಜಿಯು ಅವರನ್ನು ಯಾವಾಗಲೂ ಪ್ರೇಮದಿಂದ ಸತ್ಕರಿಸುತ್ತಿರುವನು.

ರಾಮದಾಸರ ವೈರಾಗ್ಯದ ಪರಮಾವಧಿಗೆ ಒಂದು ನಿದರ್ಶನವೇನೆಂದರೆ—

ಸಾ॥ ಧರೆಯನೊಪ್ಪಿಸಿದ ದಾನಪತ್ರವನೆ । ಗುರುಭಿಕ್ಷೆಗೆ ಕೊಡೆ ಶಿವನು ॥ ಧರಿಸಿ ಶಾಟಿಯ ನಿಶಾನಿಯನಾಳಿಂ । ದೊರೆದನಾಗ ಗುರುವರನು ॥

ಜನತೆಯಲ್ಲಿ ಪ್ರಚಾರದಲ್ಲಿರುವ ಅವರ ಇನ್ನು ಕೆಲವು ಮಹಿಮೆಗಳೇನೆಂದರೆ—

ರ॥ ಅವಮಾನಪ ಮಾಡಿದವನ ಕಣ್ಣಿಗೆ । ಶಿವಲಿಂಗವ ಕಾಣದವೊಲ್ಗೈದರು । ಶಿವರಾಯನ ದಂಡಿನ ಜನಕೆಲ್ಲ । ಬುವಿಯುಚ್ಚರಿಯೆನಲೌತನವಿತ್ತರು । ಬೇಡ ನಿಮ್ಮ ಮಂತ್ರವು ನಮಗೆಂದವ । ನಾಡುವದಕೆ ಬಾಯಿಲ್ಲದನಾದನು । ಶಿವ ರಾಯನ ಬಾಯಾರಿಕೆ ತೀರಿಸೆ । ಬುವಿಯೊಳು ಕುಬುಡಿಯ ತೀರ್ಥವ ಗೈದರು । ಜರಿಯಲು ಕಪಿರೂಪದಿ ಕಿಚ್ಚಿಟ್ಟರು । ಶರಣೆನಲೊಡನದ ನಂದಿಸುತಿದ್ದರು । ಬರೆ ದಿದ್ದಲಿಯಿಂದಲಿ ಮಾರುತಿಯನು । ಭರದಿಂದಭಿಷೇಕವ ವಿರಚಿಸಿದರು । ಮುಟ್ಟಿದ ಮಾತ್ರದಿ ಹಾವಿನ ವಿಷವನು । ಹುಟ್ಟಿಲ್ಲದವೋಲಾಗಲಿಳಿಸಿದರು । ಚಳಿಯನು ಶಾಟಿಯೊಳಗೆ ಕಟ್ಟಿಟ್ಟು । ಸಲೆ ಮಾತಾಡುವರೊಮ್ಮನವಿಟ್ಟು । ಸ್ಮರಣೆ ಮಾತ್ರದಿ ಸಮುದ್ರದ ಭಯವ । ತೊರೆಸಿ ತೋರಿದರು ಜನರಿಗಭಯವ । ಸತ್ತಾಕಳನೆಬ್ಬಿ ಸುತದರಿಂದ । ಮತ್ತೆ ಹಾಲ ಹಿಂಡಿದರದು ಚಂದ । ರಾಮದಾಸರಿಗೆ ಬೇಕಾಗಿ ಹುಡೆನೆ । ನೇಮದಿ ಹುಲಿ ಪಾಲಿತ್ತಿತು ತಾನೇ । ವರದಹಸ್ತದಿಂದಾಕ್ಷಣ ವೊಬ್ಬಳು । ಮರೆವಾಸಂದೀಬಾಯಿಯ ಆದಳು । ಹಿಡಿದ ಕಲ್ಲ ಹೊನ್ನನೆ ಮಾಡಿ ದರು । ಬಿಡದೆ ನೀರ ತುಪ್ಪವ ಮಾಡಿದರು ।

ಅವರ ಮುಖ್ಯವಾದ ಉಪದೇಶವೇನೆಂದರೆ—

ಧನ್ಯಾಸಿ—ಆದಿತಾಳ

ರಾಮ ಮಂತ್ರವ ಜಪಿಸೊ ಹೇ ಮನುಜ ॥ ಪ ॥ ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡಬೇಡ । ನೇಮದಿಂ ಭಜಿಸಲು ಕಾಮಿತಫಲವೀವ ॥ ಅ. ಪ ॥ ಕುಲ ಹೀನನಾದರೂ ಕೂಗಿ ಜಪಿಸುವ ಮಂತ್ರ । ಸಲೆ ಬೀದಿಯೊಳು ಉಚ್ಚರಿಪ ಮಂತ್ರ ॥ ಹಲವು ಪಾಪಂಗಳ ಹತಗೈಯುವ ಮಂತ್ರ । ಸುಲಭದಿಂದಲಿ ಸ್ವರ್ಗ । ಸೂರೆ ಗೊಂಬುವ ಮಂತ್ರ ॥ ೧ ॥ ಸ್ನಾನಮೌನಂಗಳಿಗೆ ಸಾಧನವೀ ಮಂತ್ರ । ಮಾನಿ ನಿಪುರು ಮನದಿ ಧ್ಯಾನಿಪ ಮಂತ್ರ ॥ ಹೀನಗುಣಂಗಳ ಹಿಂಗಿ ಕಳೆಯುವ ಮಂತ್ರ । ಏನೆಂಬೆ ವಿಭೀಷಣಗೆ ಪಟ್ಟಗಟ್ಟಿದ ಮಂತ್ರ ॥ ೨ ॥ ಸಕಲವೇದಂಗ ಳಿಗೆ ಸಾರವೆನಿಪ ಮಂತ್ರ । ಮುಕುತಿಮಾರ್ಗಕೆ ಇದು ಮೂಲ ಮಂತ್ರ ॥ ಭಕುತಿಯ ರಸಕೆಲ್ಲ ಬಟ್ಟೆದೋರುವ ಮಂತ್ರ । ಸುಖನಿಧಿ ಪುರಂದರವಿಠಲನೆನಿಪ ಮಂತ್ರ ॥ ೩ ॥ —(ದಾ)

ಇವರ ಉಪದೇಶಗಳೆಲ್ಲ ದಾಸಬೋಧವೆಂಬ ಗ್ರಂಥದಲ್ಲಿ ವಿಸ್ತಾರವಾಗಿರುವವು. ಅದರ ವಿಷಯವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಶ್ಲೋ॥ ಬೋಧಸ್ಯ ಯತ್ನಂ ಸೃಜ; ರಾಘವಸ್ಯ । ದಾಸೋ ಭವ ತ್ವಂ ಯತ ಏಷ ಬೋಧಃ; ॥ ಸ ದಾಸಪೃಷ್ಟಂ ತ್ಯಜತೀತಿ ಗುಹ್ಯಂ । ಪ್ರಭೋದಯ ನ್ನ್ಯಾತಿ ಸ ದಾಸಬೋಧಃ ॥ —(ಸು. ಲಾ)

ಅ|| ಜ್ಞಾನವನ್ನು ಪಡೆದುಕೊಳ್ಳುವ ಯತ್ನವನ್ನು ಮಾಡು. ರಾಮನ ದಾಸನಾಗು. ಏಕೆಂದರೆ ಈ ಜ್ಞಾನವು ದಾಸನನ್ನು ಬೆನ್ನುಬಿಡದೆ ಇರುವದು. ಈ ರಹಸ್ಯವನ್ನು ತಿಳಿಸುವದಕ್ಕೇ ದಾಸಬೋಧವು ಹುಟ್ಟಿದೆ. (ದಾಸ ಎಂಬ ಮಾತಿನ ಮುಂದೆ ಬೋಧ ಎಂಬ ಮಾತಿರುವದರಿಂದ ಇದು ಶ್ರೀರಾಮದಾಸರ ಗ್ರಂಥವೆಂದೂ ಅರ್ಥವಾಗುತ್ತದೆ.)

ಈ ಪ್ರಕಾರ ಧರ್ಮೋದ್ಧಾರವನ್ನು ಮಾಡಿದ ರಾಮದಾಸರು—

ಕೀ|| ಮಾಘ ಬಹುಳ ನವಮಿಯು ಶನಿವಾರವ | ದಾಗಿರೆ ಮಧ್ಯಾಹ್ನದೊಳವರು || ನೀಗಿದರಾ ಭೌತಿಕದೇಹವನದ | ನೀಗ ಜನರು ಪೂಜಿಸುತಿಹರು ||

ಇವರ ಈ ಉದಾಹರಣೆಯನ್ನಿಟ್ಟುಕೊಂಡೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ "ಜನ್ಮಸಾರ್ಥಕತೆಯ | ಸಾಧನ | ವನ್ನು ಕೇಳು ನೀನು" ಎಂದು ಮುಂತಾಗಿ ಉಪದೇಶಮಾಡಿರುವರು.

---

# ಶ್ರೀರಾಮಕೃಷ್ಣ ಪರಮಹಂಸರು

## ಪೀಠಿಕೆ — ಸಂನ್ಯಾಸ

ಯರಕುಲಕಾಂಬೋದಿ—ಝಂಪೆ.

ನಿಜವಾದ ಸಂನ್ಯಾಸಿಲಕ್ಷಣವ ಕೇಳಿ || ಪ || ಭಜಿಸಿರಯ್ಯಾ ನೀವು ಸಂತತವ ತಾಳಿ || ಅ. ಪ || ಇತರರೊಂದರ್ಥವನು ಹೇಳಿದರೆ ತನ್ನೊಳದ | ಮಥಿಸುತನುಭವದಿ ಬಿಡದೊರೆಯನಿಟ್ಟು || ಮತಿಯೊಳಗೆ ನಿಶ್ಚಯಿಸಿಕೊಳ್ವಿಚ್ಛೆಯಿರ್ಪವನೆ | ಕ್ಷಿತಿಯೊಳಗೆ ನಿಜವಾದ ಸಂನ್ಯಾಸಿಯಹನು || ೧ || ಮನಸಿನೇಕಾಗ್ರತೆಯು ತನತನಗೆ ಮುಂದುವರಿ | ದನಘವಹ ಸಜ್ಜನಸಹವಾಸದ | ಘನತೆಯನು ಬಾಲ್ಯದಿಂದಲೆ ಪಡೆಯುತಿರುವವನೆ | ಜನರೊಳಗೆ ಪೂಜ್ಯನಹ ಸಂನ್ಯಾಸಿಯಹನು ||೨|| ಬಗೆಬಗೆಯ ಸಾಧನಂಗಳ ವಿಶೇಷವನೆಲ್ಲ | ಬಗೆಗೊಂಡು ತತ್ತ್ವವನು ತಾನು ಕಂಡು || ಜಗಕದನು ಹರಡಿ ಜನಗಳನುದ್ಧರಿಸುವವನೆ | ಮಿಗಿಲಾದ ಯೋಗ್ಯತೆಯ ಸಂನ್ಯಾಸಿಯಹನು || ೩ ||

ಪ್ರಪಂಚದಲ್ಲಿ ಜನರು ಸಂನ್ಯಾಸವೆಂದರೆ ಮುಖವನ್ನು ಸೊಟ್ಟಮಾಡುತ್ತ ಬರೀ ಹೆಂಡಿರು ಮಕ್ಕಳು ಮೊದಲಾದವರೇ ತಮ್ಮ ಸರ್ವಸ್ವವೆಂದು ನಂಬಿಕೊಂಡಿರುತ್ತಾರಲ್ಲ! ಅವರಿಗೆ ನೆನಪುಗೊಡುವದಕ್ಕಾಗಿ ಪೂರ್ವಿಕರು ತಮ್ಮ ಗ್ರಂಥದಲ್ಲಿ ಬರೆದಿಟ್ಟಿರುವದೇನೆಂದರೆ—

ಸಾಂ॥ ಮಕ್ಕಳ ನೆರವಿ, ಮಂಜಿನ ಪುಂಜವಾ ಹೆ । ಮ್ಮಕ್ಕಳೆಲ್ಲರು ಮಳಲೇರಿ, ॥ ಎಕ್ಕ ಸಂಟರು ಮುಗಿಲೊಡ್ಡು, ವೈಭವ ಶಬ।ಕಿಕ್ಕಿದ ಸಕಲ ಶೃಂಗಾರ॥ —(ಶ್ರೀ. ಚ)

ಸಾಂ॥ ಸಿರಿ ಸಂಜೆಗೆಂಪು, ಸೋದರರೆಲ್ಲ ಮಂಜಿನ । ನೆರವಿ, ಸ್ತ್ರೀಯರು ದೇಶಕೋಶ ॥ ಮರುತನಿದಿರು ದೀಪ, ಯೌವನ ಸುರಧೇನು, । ಮಿಂಚು ಭಾವಿಸಲು ಬಂಧುಗಳು ॥ —(ಸಂ. ಕೌ)

ಈ ಮಕ್ಕಳು ಮೊದಲಾದವರೆಲ್ಲ ಶರೀರದ ಸಂಬಂಧದಿಂದ ಬೆಲೆಯುಳ್ಳವರು. ಆ ಶರೀರವು ಕೂಡ ನಿತ್ಯವಲ್ಲವೆಂದು ನೀತಿಶಾಸ್ತ್ರಜ್ಞರು ಹೇಳಿರುವದೇನೆಂದರೆ—

ವೃ॥ ಉಂಬೂಟಂ ಮಿಗಿಲಾಗೆ, ಯೇರುವ ಹಯಂ ಬೆಚ್ಚಲ್ಕೆ, ನೀರ್ಮೊಗಿಸೊಳ್ । ತುಂಬಲ್ಪೋಗುತೆ ಮುಗ್ಗಿಯುಂ, ಮರಣಮಕ್ಕುಂ ಜೀವಕೀ ದೇಹವೆ । ಷ್ಟಂ ಬಾಳ್ದಿರ್ಪುದು ಲಾಭಮೀ ಕೆಡುವ ಮೆಯ್ಯಿಂ ಕೊಟ್ಟು ನಿತ್ಯತ್ವವಾ । ದಿಂಬಂ ಧರ್ಮದೆ ಕೊಂಬವಂ ಚದುರನೈ ರತ್ನಾಕರಾಧೀಶ್ವರ ॥ —(ರ. ಶ.)

ಇಂಥ ದೇಹದ ಯೋಗಕ್ಷೇಮಕ್ಕಾಗಿ ಪಟ್ಟ ಕಷ್ಟಕ್ಕೆ ವಿವೇಕಿಗಳು ಪಶ್ಚಾತ್ತಾಪಪಟ್ಟಿರುವದೇನೆಂದರೆ—

ವೃ॥ ಅರಸರ ಮೆಚ್ಚಿಸಲ್ಸಹಿಸಲಾಗದ ಮಾತುಮನೆಲ್ಲ ಸೈಸಿ ಮೇಣ್ । ಪಿರಿದಳಲಿಂದೆ ಮಾರಿ ಬಹ ಕಂಬನಿಯುಂ ಬಿಡದೌಂಕಿ ಬಲ್ಪಿನಿಂ ॥ ಬರಿ ನಗೆದೋರಿ ಚಿತ್ತಮುದದಿಂ ಮರವಟ್ಟಿರೆಯುಂ ಸುಭೀತಿಯಿಂ । ದೆರಗಿದೆನಿನ್ನದೇಂ? ಕುಣಿಪೆಯೆನ್ನ ದುರಾಶೆಯೆ, ನೊಲ್ಲಸಕ್ಕಟಾ ! ॥ —(ಭ. ವೈ)

ಈ ಸ್ಥಿತಿಯನ್ನು ಸಹಿಸಲಾರದೆ ವಿವೇಕಿಗಳು ಆದಿಶಕ್ತಿಗೆ ಮೊರೆಹೊಕ್ಕಿರುವದೆಂತೆಂದರೆ—

ಆನಂದಭೈರವಿ—ಅಟತಾಳ

ದೂರುವೆನಾರ ಕಂಠೀರವವಾಹನೆ,।ದೂರಿಗೆ ಗುರಿಯಾರು ? ॥ ಪ ॥ ಆರು ನನಗೆ ದಿಕ್ಕು ನೀರಲಿ ನಾ ಬಿದ್ದು । ಮಾರಣವನ್ನು ಹೊದ್ದಿ ಹೋರಟೆಗೊಂಬಾಗ ॥ ಅ. ಪ ॥ ಷಡರಿಗಳೆಂಬ ಗುದ್ದಲಿಯನು ಪಿಡಿದು ನಾ । ನೊಡನೆ ಸುಕ್ಷೇತ್ರ ಮಧ್ಯದಲಿ ॥ ಒಡನೆ ಬಾವಿಯ ತೋಡ । ಲೆಡೆಬಿಡದಂತೆಯೆ । ನ್ನೊಡತಿ ಕಾಲನ ರೂಪ । ಜಡರಾಶಿ ತೀವಿತು ॥ ೧ ॥ ಮುಂದೆನ್ನ ಗತಿಯೇನು? । ನೊಂದೆ ನಾನೆಲೆ ತಾಯೆ । ಯಿಂದೆನ್ನಹಾಗೆಯೆ ನಾನಾದೆ ॥ ಬಂದೆನ್ನ ಮುಳುಗಿಸಿ । ಕೊಂದು ಕೂಗುವ ನೀರ । ಬಂಧಿಸುವರ ಕಾಣೆ । ಬಂಧನಹಾರಿಣಿ ॥ ೨ ॥ ಕಾಲರೂಪದ ನೀರು । ಮೇಲೆ ಮೇಲುಕ್ಕುತೆ । ಬೀಳುಗೆಡಹುತಿಹುದು ॥ ಕಾಲವಿನೋದಿನಿ । ಕಾಲ ಪಿಡಿವೆನೆಂಬ। ಪಾಲಿಪುದೆನ್ನ ದ। ಯಾಲೋಕದೆ ನಿನ್ನ ॥ ೩ ॥—(ರಾ. ವ. ಅ)

ಟಿ॥ ಜಡರಾಶಿ = ಜಲರಾಶಿ.

ಹೀಗೆ ತಾಯಿಗೆ ಶರಣುಹೋಗುವ ವಿಷಯದಲ್ಲಿ ತಡಮಾಡದೆ—

ಶ್ಲೋ॥ ಕೌಮಾರ ಆಚರೇತ್ಪ್ರಾಜ್ಞೋ ಧರ್ಮಾನ್ಭಾಗವತಾನಿಹ । ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್ ॥ —(ಸಂ. ಭಾ)

ಅ॥ ಅಶಾಶ್ವತವೂ ಪ್ರಯೋಜನಕಾರಿಯೂ ಆದದ್ದೆನಿಸಿದ ದುರ್ಲಭವಾದ ಮನುಷ್ಯಜನ್ಮವನ್ನು ಹೊಂದಿದ ಮೇಲೆ ಈ ಲೋಕದಲ್ಲಿ ವಿವೇಕಿಗಳು ಭಾಗವತಧರ್ಮವನ್ನು ಚಿಕ್ಕಂದಿನಲ್ಲಿಯೇ ಆಚರಣೆಗೆ ತರಬೇಕು.

ಮನಸ್ಸು ಹೀಗೆ ತಾಯಾದ ದೇವಿಯು ಕಡೆಗೆ ಹರಿಯಬೇಕೇ ಹೊರತು ಮನುಷ್ಯಮಾತ್ರರ ಕಡೆಗೆ ಶರಣೆನ್ನುವದಕ್ಕೆ ಹರಿಯಬಾರದೆಂದು ಕವಿಯು ಚಮತ್ಕಾರವಾಗಿ ಹೇಳಿರುವದೇನೆಂದರೆ—

ಶ್ಲೋ॥ ಮನಃ ಕುತೋದ್ಯೋಗಃ? ಸಪದಿ ವದ ತೇ ಗವ್ಯಪದವೀಂ;। ನರಂ ವಾ ನಾರೀಂ ವಾ? ಗಮನಮುಭಯತ್ರಾಪ್ಯನುಚಿತಮ್; ॥ ಯತಸ್ತೇ ಕ್ಲೀಬತ್ವಂ ಪ್ರತಿಪದಮಹೋ! ಹಾಸ್ಯಜನಕಮ್; । ಜನಸ್ತೋಮೇ ಮಾ ಗಾಸ್ತ್ವಮನುಸರ ಹಿ ಬ್ರಹ್ಮ ಪರಮಮ್ ॥ —(ಸು)

ಅ॥ ಮನಸ್ಸೇ, ಎಲ್ಲಿಗೆ ಪ್ರಯಾಣ? ನೀನು ಹೋಗುವ ಸ್ಥಲವನ್ನು ಬೇಗ ಹೇಳು. ಗಂಡಸರ ಕಡೆಗೊ? ಹೆಂಗಸರ ಕಡೆಗೊ? ಎರಡು ಕಡೆಗೆ ಹೋಗುವದೂ ಯೋಗ್ಯವಲ್ಲ. ನೀನು ನಪುಂಸಕನಾದ್ದರಿಂದ (ಮನಶ್ಶಬ್ದವು ನಪುಂಸಕಲಿಂಗ) ಹೆಜ್ಜೆಹೆಜ್ಜೆಗೂ ಹಾಸ್ಯಕರವಾಗುತ್ತದೆ. ಜನರ ಗುಂಪಿನಲ್ಲಿ ಹೋಗಬೇಡ. ನೀನು ಪರಬ್ರಹ್ಮನನ್ನು ಅನುಸರಿಸು. (ಪರಬ್ರಹ್ಮಶಬ್ದವೂ ನಪುಂಸಕಲಿಂಗ)

ಆ ಪರಬ್ರಹ್ಮನಿಗೆ ಶರಣೆಂದು ಬೇಡಿಕೊಳ್ಳಬೇಕಾದ್ದೇನೆಂದರೆ—

ಕಲ್ಯಾಣಿ—ಅಟತಾಳ

ಇಂದಿರೆಯರಸ ಬಾರೊ । ಎನ್ನಯ ಚಿತ್ತ । ವೃಂದಾವನವ ಸೇರೊ ॥ ಪ ॥ ಕಂದರ್ಪಜನಕ, ಪು । ರಂದರಮುಖಸುರ । ವೃಂದವಂದಿತಪದ, । ನಂದಗೋಪನ ಕಂದ ॥ ಅ. ಪ ॥ ಭಕ್ತಿಯೆರೆಯನೆ ಕೇಳೊ । ಸನ್ನೊಡನೆನ್ನ । ಭಕ್ತಿರಾಧೆಯನು ಕೊಳ್ಳೊ ॥ ಮುಕ್ತಿಕಾಮವೆ ವೃಂದೆ, । ಸಕ್ತಿ ಯಶೋದೆ, ವಿ । ರಕ್ತಿಯೊಡನೆ ನಂದ । ಗೇಹವೆಂದೆನ್ನುತೆ ॥ ೧ ॥ ಪಾಪಗೋವರ್ಧನದ । ಬೆಟ್ಟವನೀಗ । ನೀ ಪಿಡಿದೆತ್ತೊ ದೇವ ॥ ತಾಪಿಸುವರಿಷಟ್ಕ । ರೂಪಕಂಸನ ಭೃತ್ಯ । ರೀ ಪೊಡವಿಯೊಳಿರ । ದಾ ಪರಿ ನಾಶಿಸೊ ॥ ೨ ॥ ಮುರುಕದ ಕೊಳಲನೂದೊ । ಎನ್ನಯ ಚಿತ್ತ । ಸುರಭಿಯ ವಶವ ಮಾಡೊ ॥ ಸಿರುತಮೊನ್ನಯ ಜೀವ । ವರಗೋಷ್ಠದೊಳು ನಿಂದು । ಪರಿಪರಿಯಾಶೆಯ । ನೆರಕದಿ ಪೂರಿಸೊ ॥ ೩ ॥ ಪ್ರೇಮರಸದ ಯಮುನಾ । ತಟಿನೀತಟ । ಸೀಮೆಯಾಶಾವಟದ ॥ ಭೂಮಿಯೊಳಗೆ ಕರು । ಣಾಮಯದೃಶೆಯಿಂದ । ಸ್ವಾಮಿ, ಸುಳಿಯುತಿರು ಕಾಮಿತದಾಯಕ ॥ ೪ ॥ ಗೊಲ್ಲವೆಂಗಳ ಪ್ರೇಮದಾ । ಬಂಧವು ವ್ರಜ । ದಲ್ಲಿ ಸಿಲ್ಲಿಸೆ ನಿನ್ನನು ॥ ಗೊಲ್ಲತಿ

ಯಹೆನೆಲೊ । ದಾಶರಥಿಯೆ ನಿನ । ಗುಲ್ಲಾಸದಿಂದು । ತ್ಫುಲ್ಲಲೋಚನ, ಪೊರೆ ॥ ೫ ॥ —(ರಾ. ವ. ೮)

ಈ ಬುದ್ಧಿಯು ನಮ್ಮಲ್ಲಿ ಚೆನ್ನಾಗಿ ಏಳುವದಕ್ಕೆ ಮೊದಲು ಗುರುವನ್ನು ಪಡೆಯಬೇಕು.

ವ॥ ಮುಡಿಕೆಯ ಮಾಡುವರೆ ಮಣ್ಣೇ ಮೊದಲು; ತೊಡಿಗೆಯ ಮಾಡುವರೆ ಹೊನ್ನೇ ಮೊದಲು; ಶಿವಪಥವನರಿವಡೆ ಗುರುಪಥವೇ ಮೊದಲು; ಕೂಡಲಸಂಗಮ ದೇವರನರಿವಡೆ ಶರಣರ ಸಂಗವೇ ಮೊದಲು. —(ಬ. ವ)

ಆ ಗುರು ಹೇಗಿರಬೇಕೆಂದರೆ—

ತ್ರಿ॥ ಹುಸಿವವನ ಬೇಹಾರ; ಕಸಹತ್ತಿದಾರಂಬ, । ವಿಷಯವುಳ್ಳವನ ಗುರು ತನವವು ಮೂರು । ಮುಸಿವಣ್ಣವೆಂದ ಸರ್ವಜ್ಞ ॥ —(ಸ. ಪ)

ಮತ್ತು—

ಷ॥ ಇಂದ್ರಿಯವನೊಡೆದುಳಿದು ಕರ್ಮದ । ಬಂದಿಯಿಂ ತಲೆ ಕಳಚಿ ವಿಷಯದ । ದಂದುಗವನೀಡಾಡಿ ಮಾಯಾಪಾಶವನು ಹರಿದು ॥ ದ್ವಂದ್ವದಲಿ ರೂಪಡಗಿ ವಿಶ್ವದ । ಲೊಂದಿ ಮೆರೆಯಲು ಬಲ್ಲವನು ಗುರು । ವೆಂದೆನಿಸುವನು ರಾಯ, ಚಿತ್ತೈಸೆಂದನಾ ವಿದುರ ॥ —(ಕ. ಭಾರ)

ಜಗತ್ತಿನಲ್ಲಿ ಅವರೇ ನಿಜವಾದ ಭಾಗ್ಯಶಾಲಿಗಳು :—

ಶ್ಲೋ॥ ಸ್ವಾನಂದಭಾವೇ ಪರಿತುಷ್ಟಿಮಂತಃ; । ಸಂಶಾಂತಸರ್ವೇಂದ್ರಿಯವೃತ್ತಿಮಂತಃ; ॥ ನಾಂತಂ ನ ಮಧ್ಯಂ ನ ಬಹಿಃ ಸ್ಮರಂತಃ; । ಕೌಪೀನವಂತಃ ಖಲು ಭಾಗ್ಯವಂತಃ ॥ —(ಕೌ. ಪಂ. ಸ್ತೋ)

ಅ॥ ತಮ್ಮ ಆನಂದಸ್ವರೂಪದಲ್ಲಿ ತುಷ್ಟರಾಗಿ ಎಲ್ಲ ಇಂದ್ರಿಯಗಳ ವೃತ್ತಿಗಳನ್ನೂ ಶಾಂತವಾಗಿಟ್ಟುಕೊಂಡು ಹೊರಗೆ ಒಳಗೆ ನಡುವೆ ಏನನ್ನೂ ಸ್ಮರಿಸದೆ ಕೌಪೀನಧಾರಿಗಳಾಗಿರುವವರೇ ಭಾಗ್ಯವಂತರು.

ಅಂಥ ಸಂನ್ಯಾಸಿಗಳ ಬಳಿಗೆ ಹೋಗಿ ಪ್ರಾರ್ಥನೆ ಮಾಡಬೇಕಾದದ್ದೇನೆಂದರೆ—

ಷ॥ ಆಶೆಯೇ ವೈತರಣಿ, ಕಾಮವ । ಳಾಸವೇ ಘನನರಕ, ಕ್ರೋಧಾ । ವೇಶವೇ ಯಮನೆಂದು ಭಾವಿಸಿ ತಿಳಿದು ತನ್ನೊಳಗೆ ॥ ಗಾಸಿಗೊಳಿಪೀ ದುಷ್ಟಗುಣಗಳ । ಹೇಸಿ ನಿತ್ಯನಿರಾಶೆಯೊಳೆ ಸುಖ । ವಾಸಿಯಹ ಕಡುಲೇಸನೊದಗಿಸಿ ಪೊರೆವುದಟವೀಶ ॥ —(ಗು. ಥ. ಸಾ)

ಹೀಗೆ ಮಾಡಿ ಬಲವಾದ ವಿರಕ್ತಿಯನ್ನು ಹೊಂದಿದವರಿಗೇ ಮುಕ್ತಿಯಲ್ಲದೆ ಇತರರಿಗಿಲ್ಲವೆಂದು ಜ್ಞಾನಿಗಳು ಹೇಳಿರುವದೇನೆಂದರೆ—

ಮಾಳವಗೌಳ—ಅಟತಾಳ

ಅಗದಾಗದು ಲೋಕದವರಿಗೆ ನಿಜಮುಕ್ತಿ । ಭೋಗೇಚ್ಛೆಯೊಳಗುಳ್ಳ ಬರಿಯ ವೈರಾಗ್ಯದಿಂ ॥ ಪ ॥ ಪ್ರಸವದುಃಖದಿ ಕ್ರೀಡೆಯನು ಬಯಸ್ದ ಬಳಿಕದ।

ನೆಸಗಲಾತುರಿಪ ಕಾಮಿನಿಯಿಂದದಿ ॥ ವ್ಯಸನಕಾಲದಿ ಸಂಸ್ಕೃತಿಗೆ ಹೇಸಿ ಸುಖವು ಸಂ । ಧಿಸಲು ವೈಮುರಿವ ಪ್ರಸೂತಿವೈರಾಗ್ಯದಿಂ ॥ ೧ ॥ ಸಳಕೃಷ್ಣಾದ್ಯರ ಹಾಸಿ ಕಥೆಕೇಳ್ವ ಸಮಯದೊ । ಳಿಳೆಯ ಭೋಗವನೆಲ್ಲ ಪುಸಿಗಾಣುತೆ ॥ ಬಳಿಕೀಚೆಗೈ ತಂದು ಸತಿಪುತ್ರಧನಧಾನ್ಯ।ಗಳಿಗೆ ಬಾಯ್ಬಿಡುವ ಪುರಾಣವೈರಾಗ್ಯದಿಂ ॥ ೨ ॥ ಶವವ ಸಂಸ್ಕರಿಸುವಲ್ಲಳುವರ ಕಂಡು ದೇ।ಹವನೆಚ್ಚೆವೆನ್ನೆಂದು ದೃಢವ ಮಾಡಿ ॥ ಭವನಕೈದಿದ ಕೂಡೆ ಗುರುಸಿದ್ಧ ಬಳಲಿ ಗಾ। ಯುಪಸುಪಚರಿಪ ಶ್ಮಶಾನವೈರಾಗ್ಯದಿಂ ॥ ೩ ॥ —(ಕೈ. ಕ)

ಇಂಥ ವೈರಾಗ್ಯವನ್ನು ಕೊಡಬೇಕಾದರೆ ಗುರುಗಳು ನಿಜವಾದ ಸಂನ್ಯಾಸಿಗಳಾಗಿರಬೇಕೆಂದು ಯೋಚಿಸಿ ಜನರ ತಿಳಿವಳಿಕೆಗಾಗಿ ದೊಡ್ಡವರು ಅಂಥವರ ಲಕ್ಷಣವನ್ನು ಕುರಿತು ಪೀಠಿಕೆಯಲ್ಲಿ ಹೇಳಿರುವದೇನೆಂದರೆ "ನಿಜವಾದ ಸಂನ್ಯಾಸಿ ಲಕ್ಷಣವ ಕೇಳಿ."

ಈ ವಿಷಯಗಳಿಗೆಲ್ಲ ಉದಾಹರಣೆಯಾಗಿ ಪ್ರಸಿದ್ಧರಾದ ಶ್ರೀರಾಮಕೃಷ್ಣಪರಮಹಂಸರ ಆಖ್ಯಾನವು ಯಥಾಮತಿ ನಿರೂಪಣಮಾಡಲಾಗುವದು.

## ಆಖ್ಯಾನ

ಆ॥ ಬರ್ದವಾನ ಜಿಲ್ಲೆಯೊಳಿಹ ದೇರೆಯೊ । ಳಿರ್ದನು ಖುದಿರಾಮಾಭಿದನು ॥ ಸೇರ್ದಿಹ ಚಂದ್ರಾದೇವಿಯೊಡನೆ ಬಹು । ಶ್ರದ್ಧಾಭಕ್ತಿಯೊಳಾ ದ್ವಿಜನು ॥

ಟಿ॥ ದೇರೆ = ದೇರಿ ಎಂಬ ಗ್ರಾಮ.

ಅವನಿದ್ದ ರೀತಿ—

ಷ॥ ಬಲಿದ ಸಂಯಮವೇ ಅವನ ಬೆಂ । ಬಲವದೆನಿಸಿಹ ಮೂಲಮಂತ್ರವು; । ತಳೆಯಲಿಹ ವೈರಾಗ್ಯಕಾಗಿಯೆ ತಾ ಪಡುವ ಸುಖವು; ॥ ಒಲಿವ ತ್ಯಾಗಕ್ಕಾಗಿ ಭೋಗವು; । ಸಲೆ ಪರಕ್ಕಾಗಿಯೆ ಇಹವು; ಮೇ । ಣ್ತಿಳಿಯಲೀಶ್ವರನನ್ನು ಕಾಣ್ಬುದದೊಂದೆ ಉದ್ದೇಶ ॥

ಟಿ॥ ಸಂಯಮ = ಏಕಾಗ್ರತೆ. ತಳೆಯಲಿಹ—ಮುಂದೆ ಪಡೆಯುವ.

ಇಂಥವನ ಜೀವಿತಕಾಲದಲ್ಲಿ ಪಶ್ಚಿಮದಿಂದ ಬೀಸಿದ ಬಿರುಗಾಳಿಯಿಂದ ಕಾಲಸ್ಥಿತಿ ಹೇಗಿತ್ತೆಂದರೆ—

ಸೀ॥ ಸಿರಿಯ ಹೆಚ್ಚುಗೆಯ ಮೇಲಿಯೆ ಜನರ ಮೆಚ್ಚುಗೆಯು;—ಪರಮಾತ್ಮ ವಿದ್ಯೆಯೆಂದೊಡನುಪೇಕ್ಷೆ; । ಪರಿಪರಿಯ ವಿಷಯಂಗಳಿಂದಲೇ ಸೌಖ್ಯವನು-

ದೊರಕಿಸುವದೇ ಇಂದ್ರಿಯಗಳಪೇಕ್ಷೆ; | ಧರೆಯೊಳಗೆ ವಿಜ್ಞಾನಶಾಸ್ತ್ರವೇ ಶಾಸ್ತ್ರವಾ-ಗಿರುವದೆಂಬರ್ಥವೇ ಹಿಡಿದ ಪಟ್ಟು; | ಅರಿಯೆ ಧರ್ಮಾಧರ್ಮವೆಲ್ಲ ಹಣದಾಸೆಯಿಂ-ಧರೆಯಮರರೆಲ್ಲ ಮಾಡಿರುವ ಕಟ್ಟು; || ಪರಲೋಕ ಕವಿ ತಾನೆ ಕಲ್ಪಿಸಿದುದು; | ಪರಮಾತ್ಮನೆಂಬೊಂದು ಕಾಣಬರದು; | ವರವೇದವಹುದು ಪಾಶ್ಚಾತ್ಯರುಕ್ತಿ;| ನೆರ ಕೃತಾರ್ಥತೆಯ ಸಾಧನವು ಭಕ್ತಿ ||

ಈ ಕಾಲಮಹಿಮೆಯಿಂದ ಖುದಿರಾಮನಿಗೊದಗಿದ ದುರ್ದಶೆ—

ಸಾ|| ಸುಳ್ಳುಸಾಕ್ಷಿಯನು ಹೇಳದ ತಪ್ಪಿಗೆ | ಸುಳ್ಳು ಪತ್ರವನು ಮಾಡಿ || ಎಲ್ಲವ ರಾಮಾನಂದರಾಯ ತಾ | ಕೊಳ್ಳೆಯ ಹೊಡೆದನು ಖೋಡಿ ||

ಇದರಿಂದ ಖುದಿರಾಮನು ದೇರೆಯನ್ನು ಬಿಟ್ಟು ಹೊರಟಾಗ—

ದಿಂ|| ಗೆಳೆಯನೋರ್ವಂ ಕಾಮಾರಪುಕುರದಲ್ಲಿ | ಬೆಳೆದವಂ ತಾಂ ಗೋಸ್ವಾಮಿ ಹೆಸರಿನಲ್ಲಿ || ಹಳೆಯ ಗೆಳೆಯಂಗೀ ಕಷ್ಟಕಾಲದಲ್ಲಿ | ನೆಲನನೀಯುತ್ತಂ ನಿಲ್ಲಗೈದನಲ್ಲಿ ||

ಟಿ|| ಕಾಮಾರಪುಕುರ—ಇದೊಂದು ಗ್ರಾಮದ ಹೆಸರು.

ಶ್ರೀರಾಮಭಕ್ತನಾದ ಖುದಿರಾಮನು ಅಲ್ಲಿರುವಾಗ ಒಂದು ದಿನ ಕಾರ್ಯಾಂತರದಿಂದ ತಂಗಿಯ ಮಗನ ಊರಿಗೆಂದು ಪ್ರಯಾಣಮಾಡುತ್ತಿರುವಾಗ ಕಾಡಿನಲ್ಲಿ—

ಸಾಂ|| ನೋಡಿದನೊಂದು ಸಾಲಿಗ್ರಾಮವ ಹೆಡೆ | ಯಾಡುವ ಹಾವಿನ ನೆಳಲೊಳ್ || ಮಾಡಿ ಮನವ ಕೊಳ್ಳಲದು ರಘುವೀರನ | ಪಾಡಿರೆ ನಲಿದನುತ್ಸವದೊಳ್ ||

ಟಿ|| ರಘುವೀರನ ಪಾಡು — ರಘುವೀರ ಸಾಲಿಗ್ರಾಮದ ಲಕ್ಷಣ.

ಈ ಪ್ರಕಾರ ತನ್ನ ಇಷ್ಟದೇವತೆಯ ಪ್ರತೀಕವು ಅನಾಯಾಸವಾಗಿ ದೊರೆತ ಆನಂದದಲ್ಲಿರುವಾಗ ಕಣ್ಣೆದುರಿಗೆ ಒಂದು ಬಿಲ್ವವೃಕ್ಷವು ಕಾಣಬಂತು. ಖುದಿರಾಮನು ರಾಮಭಕ್ತನಾದರೂ ಹರಿಹರರಲ್ಲಿ ಭೇದವನ್ನೆಣಿಸತಕ್ಕವನಾಗಿರಲಿಲ್ಲ—

ಶ್ಲೋ|| ನ ತೇ ಮಯ್ಯಚ್ಯುತೇಽಜೇ ಚ ಭಿದಾಮಣ್ವಪಿ ಚಕ್ಷತೇ || ನಾತ್ಮನಶ್ಚ ಜನಸ್ಯಾಪಿ ತದ್ಯುಷ್ಮಾನ್ವಯಮೀಮಹಿ || —(ಸಂ. ಭಾಗ)

ಅ|| ಅವರು (ಬ್ರಾಹ್ಮಣರು) ನನ್ನಲ್ಲಿಯೂ ವಿಷ್ಣುವಿನಲ್ಲಿಯೂ ಬ್ರಹ್ಮನಲ್ಲಿಯೂ ನಮ್ಮ ಭಕ್ತರಲ್ಲಿಯೂ ಒಂದು ರವೆಯಷ್ಟು ಭೇದವನ್ನು ಮಾಡುವದಿಲ್ಲ. ಆದ್ದರಿಂದ ನಾವು ನಿಮ್ಮನ್ನು ಗೌರವಿಸುತ್ತೇವೆ.

ಎಂದು ಪರಮೇಶ್ವರನು ಮಾರ್ಕಾಂಡೇಯನಿಗೆ ಹೇಳಿದ ಅರ್ಥಕ್ಕೆ ಖುದಿರಾಮನೂ ಉದಾಹರಣೆಯಾಗುವದಕ್ಕೆ ತಕ್ಕವನಾಗಿದ್ದನು. ಕೋಮಲವಾಗಿ ಬೆಳೆದಿದ್ದ ಬಿಲ್ವದಲಗಳನ್ನು ನೋಡುತ್ತಲೆ ಒಂದು ಬಗೆಯ ಹೊಸ ಧನ್ಯತೆಯನ್ನು ಅನುಭವಿಸುವವನಾಗಿ ಅವನು ಹಾಡಿದ್ದೇನೆಂದರೆ—

ರೇಗುಪ್ತಿ—ಅಟತಾಳ

ಧನ್ಯನಾದೆನು ನಾನು । ನೋಡುತ । ಲಿಸ್ನೀ ಬಿಲ್ವವನು ॥ ಪ ॥ ಧನ್ಯನಾದೆ ನಾನಿದರಿಂ ಪರಶಿವ । ನನ್ನು ಪೂಜಿಸುವ ಮನವನು ಪಡೆದೆನು ॥ ಅ. ಪ ॥ ಎಷ್ಟು ಕೋಮಲಗಳು ! । ದಲಗಳು । ಎಷ್ಟು ಸುಂದರಗಳು ! ॥ ಅಷ್ಟಮೂರ್ತಿಗಿವನರ್ಪಿಸಿದೊಡನವ।ನೆಷ್ಟು ಸಂತಸವ ತಾಳ್ವನೊ ಕಾಣೆನು ! ॥ ೧ ॥ ದಿನವಿದು ಶುಭದಿನವು; । ನೋಡಲು । ಮನಕೆ ಸುಖಪ್ರದವು; ॥ ಅಣಿಮಾದಿಗಳೊಡೆಯನಿಗಿವನರ್ಪಿಸೆ । ಜನುಮವಿದೀಗಲೆ ಸಾರ್ಥಕವಪ್ಪುದು ॥ ೨ ॥ ಸಾಕು ಮುಂದಿನ ಪಯಣ । ಮತ್ತೀಂ । ಬೇಕಿದೆ ಜೀವಧನ? ॥ ಜೋಕೆಯಿಂದ ತಿರಿದಿವುಗಳನಿಂದು ಪಿ । ನಾಕಿಯ ಪಾದಕೆ ಹಾಕುವೆ ತಪ್ಪದೆ ॥ ೩ ॥

ಆಗ ಅವನು—

ಷ॥ ಮರೆತು ಪಯಣವನೆಲ್ಲ । ಹರನ ಪೂಜಿಸಲೆಂದು । ತಿರಿದು ಬಿಲ್ವದ ದಲಂಗಳನೆಲ್ಲವ ॥ ತಿರುಗಿ ಮನೆಯೊಳು ಭಕ್ತಿ । ಭರದಿ ಪೂಜಿಸಿ ಶಿವನ । ಮರು ದಿನದಿ ಪಯಣವನು ಕೈಗೊಂಡನು ॥

ಇಷ್ಟು ಶ್ರದ್ಧಾವೇಶವುಳ್ಳ ಖುದಿರಾಮನು ಉತ್ತರದೇಶದ ಯಾತ್ರೆಗೆ ಹೋಗಿದ್ದಾಗ—

ಷ॥ ಶ್ರದ್ಧೆಯಿಂದ ಗಯೆಯೊಳಿರುವ । ಮುದ್ದು ಗದಾಧರನ ಪದಕೆ । ಬಿದ್ದು ಪಿಂಡವನ್ನು ಹಾಕಿ ತೃಪ್ತನಾಗಿರೆ ॥ ಉದ್ಧರಿಸಲು ಕನಸಿನೊಳಗೆ । ಶುದ್ಧರೂಪಿ ಬಂದು ತಾನೆ । ಮುದ್ದುಗುವರನಪ್ಪೆ ನಿನಗೆನುತ್ತೆ ಪೇಳ್ದನು ॥

ಈ ಅಭಿಪ್ರಾಯವು ಮನಸ್ಸಿನಲ್ಲಿ ಮತ್ತಷ್ಟು ಬಲಗೊಳ್ಳುವಂತೆ ಇನ್ನೊಂದು ದಿನ—

ಸಾಂ॥ ಇರಲು ಚಂದ್ರಾದೇವಿ ಶಿವನಿಲಯದ ಬಳಿ । ಭರದಿ ತೇಜಸ್ಸೊಂದು ಬಂದು ॥ ನೆರೆ ಪೊಕ್ಕಿತವಳ ಗರ್ಭವನದ ಕಂಡಾ । ತರುಣಿಯುಚ್ಚರಿಗೊಂಡಳಂದು ॥

ಒಡನೆ ಗರ್ಭಿಣಿಯಾದ ಚಂದ್ರಾದೇವಿಯು ನವಮಾಸದ ಮೇಲೆ ಶಾ. ಶ. ೧೭೫೭ ರಲ್ಲಿ ಶಿಶುವನ್ನು ಹಡೆದದ್ದು—

ಷ॥ ತಾರೆಗಳ ಹಡೆದಿರ್ದ ಗಗನವು । ದಾರತಾರಾಪತಿಯ ಹಡೆದವೊ । ಲಾರಮಣಿ ಕೆಲಸುತರ ಹಡೆದಿರ್ದೀಗಳೀ ಶಿಶುವ ॥ ಸಾರೆ ತ್ರಿಗ್ರಹಕೂಟವದರೊಳು । ತೋರೆ ಪಂಚಗ್ರಹಗಳುಚ್ಚದಿ । ಭೂರಿಹರ್ಷದಿ ಹಡೆದಳಿದ ಕಾಮಾರಪುಕುರದೊಳು ॥

ಪರಮಾತ್ಮನು ತನ್ನ ಅವತಾರಕ್ಕೆ ಇಂಥ ಬಡವರ ಮನೆಯನ್ನು ಆರಿಸಿಕೊಂಡಿರಲಾರನೆಂದು ಸಂಶಯಗೊಳ್ಳಬಾರದು. ಅವತಾರಕ್ಕೆ ನೋಡಬೇಕಾದ ಯೋಗ್ಯತೆಯು ಪವಿತ್ರತೆ. ಯೋಗಭ್ರಷ್ಟನ ಗತಿಯೇನೆಂದು ಅರ್ಜುನನು ಕೇಳಿದಾಗ ಕೃಷ್ಣನು ಅವನಿಗೆ ಮುಂದೆ ಒಳ್ಳೆ ಶ್ರೀಮಂತರ ಮನೆಯಲ್ಲಿ ಜನ್ಮವಾಗುವದೆಂದು ಹೇಳಿ ಅಷ್ಟಕ್ಕೆ ಬಿಡದೆ—

ಶ್ಲೋ॥ ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ॥

—(ಭ. ೧೯)

ಅ|| ಅಥವಾ ಬುದ್ಧಿಶಾಲಿಗಳಾದ ಯೋಗಿಗಳ ಕುಲದಲ್ಲಿಯೇ ಹುಟ್ಟುತ್ತಾನೆ.

ಎಂದು ಹೇಳಿ—

ಶ್ಲೋ|| ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ||

—(ಭ. ೧೯)

ಅ|| ಜಗತ್ತಿನಲ್ಲಿ ಈ ಬಗೆಯ ಜನ್ಮವು ದೊರೆಯುವದು ಕಷ್ಟಸಾಧ್ಯ.

ಎಂದು ಯೋಗಿಗಳ ಕುಲವನ್ನು ಹೊಗಳಿದ್ದಾನೆ. ಹೀಗೆ ಯೋಗಿಗಳ ಕುಲವು ಪವಿತ್ರವಾದ್ದರಿಂದ ಪರಮೇಶ್ವರನು ತನ್ನ ಅವತಾರಕ್ಕೆ ಈ ಕುಲವನ್ನು ಆರಿಸಿಕೊಂಡದ್ದು ಸಮಂಜಸವಾಗಿರುವದು.

ಹೀಗಿರುವಾಗ ಆ ಶಿಶುವಿನ ನಾಮಕರಣಮಹೋತ್ಸವಕ್ಕೆ ಸೇರಿದ್ದ ಮಹನೀಯರು—

ಸಾ|| ಗಯೆಯ ಗದಾಧರನಂಶದ ಶಿಶುವಾ । ರಯಲು ಗದಾಧರನೆಂದು || ಜಯಜಯಕಾರವ ಗೆಯ್ಯುತ ಬ್ರಾಹ್ಮಣ । ಚಯವದ ಹೆಸರಿಸಿತಂದು ||

ಆಮೇಲೆ—

ಸಾ|| ತಂದೆಯ ತೊಡೆಯೊಳೆ ಪುರಾಣಕಥೆಗಳ | ಚಂದದಿ ಕಲಿತ ಗದಾಧರನು || ಮುಂದಿಯೆಲ್ಲ ಬೆರಗಾಗುವವೋಲಾ । ಸಂದಮೂರ್ತಿ ಕಂಗೊಳಿಸಿದನು ||

ಚಿಕ್ಕಂದಿನಿಂದಲೂ ಯಾವ ವಿಷಯವನ್ನಾದರೂ ಅನುಭವಕ್ಕೆ ಹೊಂದಿಸಿಕೊಂಡು ನೋಡುವದರ ಕಡೆಗೆ ಅವನ ಒಲವು ಚೆನ್ನಾಗಿ ಕಾಣುತ್ತಿತ್ತು. ಒಂದು ದಿನ ಅವನ ಕುಮಾರಾವಸ್ಥೆಯಲ್ಲಿ—

ಷ|| ಕೆರೆಯೊಳಗೆ ಹೆಂಗುಸರು ಏಾಯು | ತ್ತಿರಲಿಳಿದು ಚೇಷ್ಟೆಯನು ಗೈದೀ । ತರುಣನನು ಕುರಿತವರು ನಾಚಿಕೆಯಿಲ್ಲ ಸಿಸಗೆನಲು ||ಮರೆಯೊಳಿರ್ದೀಕ್ಷಿಸುತವರ ತಾ | ನಾರಿಯುದೆಯ ನಾಚಿಕೆಯ ಕಾರಣ । ದಿರವ ಮನೆಗೈತಂದು ತಾಯೊಡನದನು ಪೇಳಿದನು ||

ಈ ಬುದ್ಧಿಯೊಂದು ದೊಡ್ಡ ಸುಚಿಹ್ನವೆಂದು, ತೋರಿಸುವದಕ್ಕಾಗಿಯೇ ಪೀಠಿಕೆಯಲ್ಲಿ **"ಇತರರೊಂದರ್ಥವನು ಹೇಳಿದರೆ .........."** ಎಂದು ಮುಂತಾಗಿ ಹೇಳಿರುವದು. ಆಗ ತಾಯಿಯು ಹೇಳಿದ ಬುದ್ಧಿವಾದ—

**ಚಕ್ರವಾಕ—ರೂಪಕ**

ಲಾಲಿಪುದೀ ಮಾತನು । ಬಾಲನೆ ನೀ ಜಾಣನು || ಪ || ಕೇಳಲಿಂತು ನೀನಿದ | ತಾಳುವೆನೀ ಬಹುಮುದ || ಅ. ಪ || ತಿಳಿಯಲಾರೆ ದೊಡ್ಡವರ | ತಳಮಳಗಳ ನೀನೀಗಲೆ || ಸಲೆ ಹೇಳಿದಂತೆ ನಡೆವ । ಒಲವಿರೆ ಯೋಗ್ಯವೆನಿಪುದು ||೧|| ಗಂಡು ಹುಡುಗ ನೀನು ಸ್ತ್ರೀಯರ । ತಂಡದಲ್ಲಿ ಹೋಗಸಲ್ಲ;|| ಕಂಡಜನರು ದೂರುವರು | ಭಂಡನೆಂದು ನಿನ್ನ ಜನರು || ೨ ||

ಕೆಲವು ದಿನಗಳಲ್ಲಿಯೇ ಅವನ ವಿದ್ಯಾರ್ಥಿದಶೆಯಲ್ಲಿ ಕಂಡು ಬಂದ ಲಕ್ಷಣಗಳೇನೆಂದರೆ—

ಚೌ|| ಓದುವನು ರಾಗದೊಳು ; ಮೇಣದ-ಮೋದದಿಂದನುಕರಿಪನು; । ಆದರದಿ ಕಥೆಗೇಳ್ವನುತ್ತಮ-ವಾಧ ಮೂರ್ತಿಯಗೈವನು ;|| ಭೇದವೆಳ್ಳಷ್ಟಿಲ್ಲ

ವೆನೆ ಸೊಂ-ಪಾದ ಚಿತ್ರವ ಬರೆವನು ; | ಮೇದಿನಿಯು ಜನ ನಗುವ ಪೋಲು ವಿ-ನೋದವನು ನೆರೆ ಗೈವನು ||

ಚಿಕ್ಕಂದಿನಲ್ಲಿ ಇವನಿಗೆ ಯಾವ ರೋಗಪೀಡೆಯೂ ಇಲ್ಲದ್ದು ಒಂದು ವಿಶೇಷ. ಇದಕ್ಕೆ ಕಾರಣವೂ ಇಲ್ಲದೆ ಇಲ್ಲ. ದೊಡ್ಡವರು ಹೇಳುವದೇನೆಂದರೆ—

ಸಾಂ|| ಕಾಯದ ಮೇಲೆ ಮನಸ್ಸು ಹೋದೊಡೆ ರೋಗ | ಕಾಯುತನವು ಕಾಯುವಾಗ ; || ಮಾಯವಪ್ಪವು ರೋಗಗಳು ಹರಿದಾಟದ | ದಾಯವ ಬಿಡೆ ಮನ ಬೇಗ ||

ಇದಲ್ಲದೆ ಗದಾಧರನು ಭಾವನಾಮಯವಾದ ಮನಸ್ಸುಳ್ಳವನಾಗಿದ್ದು ಬಹು ಬೇಗ ಏಕಾಗ್ರತೆಯನ್ನು ಪಡೆಯುವವನಾಗಿದ್ದದ್ದು—

ಷ|| ಗಗನದಿ ಬಲಾಕಾಖ್ಯ | ಖಗ ಹಾರುತಿರಲವನು | ಬಗೆದು ಭಾವದೊಳು ಮೈಮರೆಯೆ ನೋಡಿ || ವಿಗೆ ಮೂರ್ಛೆಯೆಂದರಿಯು | ತಗಣಿತಜಪಾದಿಗಳ | ಸೊಗಸುಗೈದರು ಬಂಧುಜನರು ಕೂಡಿ ||

ಆದರೆ ಆ ಸ್ಥಿತಿ ಮೂರ್ಛೆಯಾಗಿರದೆ ಆ ಹಕ್ಕಿಗಳ ಅಂತರ್ಯಾಮಿಯ ಪ್ರಭಾವವನ್ನು ನೆನೆಸಿಕೊಂಡ ಸಮಾಧಿಯಾಗಿದ್ದದ್ದು—

ಶ್ಲೋ|| ದೇಹಾಭಿಮಾನೇ ಗಲಿತೇ ವಿಜ್ಞಾತೇ ಪರಮಾತ್ಮನಿ | ಯತ್ರ ಯತ್ರ ಮನೋ ಯಾತಿ ತತ್ರ ತತ್ರ ಮನೋಲಯಃ || —(ಸು)

ಅ|| ದೇಹಾಭಿಮಾನವು ಹೋಗಿ ಪರಮಾತ್ಮತತ್ತ್ವವು ತಿಳಿದರೆ ಮನಸ್ಸು ಎಲ್ಲೆಲ್ಲಿ ಹೋಗುವದೊ ಅಲ್ಲಿಲ್ಲ ಸಮಾಧಿಗಳು.

ಎಂಬ ಉಕ್ತಿಯಂತೆ ಗಂಗಾಧರನದು ಭಾವಸಮಾಧಿಯಾಗಿತ್ತು. ಇದರ ವಿಷಯವಾಗಿ ಶ್ರೀ ಪತಂಜಲಋಷಿಗಳು ಹೇಳಿರುವದೇನೆಂದರೆ—

ಸೂ|| ತದೇವಾರ್ಥಮಾತ್ರಸಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ ||
—(ಯೋ. ಶಾ)

ಇದೇ ಸಂದರ್ಭದಲ್ಲಿ ಶ್ರೀ ನಾರದಋಷಿಗಳು ಹೇಳಿರುವದೇನೆಂದರೆ—

ಸೂ|| ಯಜ್ಜ್ಞಾತ್ವಾ ಮತ್ತೋ ಭವತಿ ಸ್ತಬ್ಧೋ ಭವತಿ ಆತ್ಮಾರಾಮೋ ಭವತಿ || —(ನಾ. ಭ. ಸೂ)

ಅ|| ಅದನ್ನು (ಪರಮಾತ್ಮಸ್ವರೂಪವನ್ನು) ತಿಳಿದು ಮತ್ತನಾಗುತ್ತಾನೆ; ಸ್ತಬ್ಧನಾಗುತ್ತಾನೆ; ಆತ್ಮಾರಾಮನಾಗುತ್ತಾನೆ.

ಇಂಥ ಸಮಾಧಿಯೇ ಅವನಲ್ಲಿ ಮತ್ತೊಮ್ಮೆ ಕಾಣಿಸಿಕೊಂಡದ್ದೆಂತೆಂದರೆ—

ಷ|| ಶಿವನ ಕಥೆಯನಾಡಲೆಂದು | ಶಿವನ ವೇಷವನ್ನು ಹಾಕಿ | ಶಿವನ ಮಯನೆ ಆಗಿ ಗದಾಧರನು ನಿಂತನು ; || ಬವಣಿಗೊಂಡು ಹುಡುಗರಾಗ | ಕವಿದು ಸಂತಯಿಸಿದರಿಂತು | ಶಿವನ ಕಥೆಯು ನಿಂತಿತೆಂದು ನೋಳ್ಪ ಜನರಿಗೆ ||

ಹೀಗೆ ಗಧಾಧರನಿನ್ನೂ ಚಿಕ್ಕವನಾಗಿರುವಾಗಲೇ—

ಸಾ|| ಮಗನಸಭ್ಯುದಯುವ ನೋಡುವೆನೆಂಬುದ । ಬಗೆಗೊಳ್ಳದೆ ಖುದಿರಾಮು ॥ ಚಿಗಿದನು ಸ್ವರ್ಗಕೆ ಚಂದ್ರಾದೇವಿಗೆ । ಹಗರಣವಾಗಲು ಕ್ಷೇಮು ॥

ಆಗ ಆಕೆ ಹಂಬಲಿಸಿದ್ದು—

ಪೀಲು—ತ್ರಿಶ್ರಭಾವು

ಇನ್ನೇನು ಮಾಡಲಿ? । ಎನ್ನ ನಾಥನು ಹೋದ ; ಬನ್ನಕ್ಕೆ ಗುರಿಯಾದೆ; । ಪನ್ನಗಭೂಷಣ ॥ ಪ ॥ ಯಾರ ಪೂಜಿಸಲಿನ್ನು? ಯಾರ ವಂದಿಸಲಿನ್ನು? ॥ ಯಾರ ಸ್ತುತಿಸಲಿನ್ನು? । ಶ್ರೀರಸಗಲಿದನೆ ॥ ೧ ॥ ಧರ್ಮಕೆ ಗತಿಯೇನು? । ಕರ್ಮಕೆ ದಿಕ್ಕೇನು? ॥ ಪೇರ್ಮೆಯೆಂಬುವದರ । ಮರ್ಮ ಭೇಧಕವಾಯ್ತೆ? ॥ ೨ ॥ ಧರಣಿಯೊಳಗೆ ಗದಾ । ಧರನ ಪೋಷಿಪರಾರು? ॥ ಅರಿತು ಸುಶಿಕ್ಷೆಯ । ಕರುಣಿಸುವವರಾರು? ॥ ೩ ॥

ಖುದಿರಾಮನು ಹೋದಮೇಲೆ ಗದಾಧರನ ಭಾರವೆಲ್ಲ ಚಂದ್ರಾದೇವಿಯ ಮೇಲೆ ಬಿತ್ತು. ಈ ಸಂದರ್ಭದಲ್ಲಿ ಆಕೆಗೊಂದು ಬಿಕ್ಕಟ್ಟಿನ ಪ್ರಸಂಗ ಒದಗಿ ಪರಿಹಾರವಾದದ್ದೆಂತೆಂದರೆ—

ಷ|| ಹೊರಡುತ ಜಗನ್ನಾಥಯಾತ್ರೆಗೆ । ತೆರಳುತಿಹ ಸಜ್ಜನರ ಗುಂಪೀ । ತರಳನನು ಕಂಡಪ್ಪಿ ತಮ್ಮುಡುಪಿಂದಲಂಕರಿಸಿ ॥ ಮೆರೆಸುತಿರಲವರವನ ಕೊಂಡೊ । ಯ್ವರೊ । ಎನುತ ಕಾತರಿಪ ತಾಯಿಗೆ । ಭರವಸಂಗೊಡಲವರು ಬಂದರುಪಿದರು ಸಂತಯಿಸಿ ॥

ಹೀಗಾಗುವದು ಭಾವಿಶುಭೋದಯವನ್ನು ಸೂಚಿಸುವದೆಂದು ಹೇಳುವದಕ್ಕಾಗಿಯೇ ಪೀಠಿಕೆಯಲ್ಲಿ "ಮನಸಿನೇಕಾಗ್ರತೆಯು ತನತನಗೆ........" ಎಂದು ಮುಂತಾಗಿ ಹೇಳಿರುವದು. ಇದಾದ ಸ್ವಲ್ಪ ದಿನಗಳಲ್ಲಿಯೇ ಅಣ್ಣನಾದ ರಾಮಕುಮಾರನು ಗದಾಧರನ ಉಪನಯನವನ್ನು ಸಾಗಿಸಿದಾಗ ಗದಾಧರನು ಮಾತೃಭಿಕ್ಷೆಯ ಮಾತು ಬರುತ್ತಲೇ ಹಠವನ್ನು ಹಿಡಿದು ಹೇಳಿದ್ದೇನೆಂದರೆ—

ಬಿಲಹರಿ—ತ್ರಿಶ್ರಭಾವು

ನಡೆಯಬೇಕೆನ್ನಮಾತು । ಅಣ್ಣನೆ ಕೇಳು ॥ ಪ ॥ ದಾದಿಯಾಗಿಹ ಧನಿಯು । ಕೇಳಿದಳೆನ್ನ । ನಾದರಿಸುತ ಬಾಲ್ಯದಿ; ॥ ಮೋದಗೊಳಿಸುಪನಯನ ಕಾಲದೊ । ಳೀ ದರಿದ್ರಳ ಭಿಕ್ಷೆಯನು ಕೊಂ । ಡಾದಪೆನು ತಾಯಾಗಿ ನಿನಗೆನ । ಲಾದುದೆಂದರಿಯೆನುತ ಪೇಳ್ದೆನು ॥ ೧ ॥ ಸಾಕಿದ ತಾಯಾಕೆಯು ; । ಭಿಕ್ಷೆಯ ಹಾಕ । ಬೇಕೀಗಳೆನಗಾಕೆಯೆ ; ॥ ಆಕೆ ತಾ ಕಮ್ಮಾರಳೆನುತಲಿ । ನೂಕಬಾರದು ; ಬ್ರಾಹ್ಮಣನ ನುಡಿ । ಜೋಕೆಯಿಂದಲಿ ಸತ್ಯವಾಗದೊ । ಡೇಕೆ ಬರಿಯುಪನಯನವೀ ಪರಿ? ॥ ೨ ॥

ಗದಾಧರನು ವಿಶೇಷ ಅಧ್ಯಯನವನ್ನು ಮಾಡಿದವನಲ್ಲವಾದರೂ ಅಮೇಲೊಂದು ದಿನ—

ಕೀ|| ಧರ್ಮದಾಸನಾಗಾರದಿ ಬುಧತತಿ । ಪೇರ್ಮೆಯ ವಾದದೊಳಿರೆ ಕಂಡು ॥ ಮರ್ಮವನರುಪುತ್ತಿಂತಹ ವಿದ್ಯೆಯ । ಧರ್ಮವೆಂದನದ ಬಗೆಗೊಂಡು ॥

ಟಿ|| ವಿದ್ಯೆಯು+ಅಧರ್ಮ

ಇಷ್ಟರಲ್ಲಿ—

ಷ॥ ಅಣ್ಣಾರಾಮಕುಮಾರ ಕಲಿಕತೆ । ಯನ್ನು ಸೇರುತಾ್ತ ಗದಾಧರ । ನನ್ನು ಕರೆಯಿಸಿಕೊಂಡು ಶಾಲೆಯನೊಂದ ನಡೆಸುತ್ತ ॥ ಉನ್ನತವೆನಲ್ ಶಕ್ತಿ ಮಂತ್ರಗ । ಳನ್ನು ಜಪಿಸುತ ಧರ್ಮಮರ್ಮಗ । ಳನ್ನು ತಿಳಿಸುತ ತಮ್ಮನನು ತಿದ್ದಿದನು ತನ್ನಂತೆ ॥

ಹೀಗೆ ಕೆಲವು ದಿನ ನಡೆಯುತ್ತಿರಲು—

ಚೌ॥ **ಜಾನ್ ಬಜಾರಿನ** ರಾಣಿ **ರಾಸ್ಮಣಿ**ಯೆಂಬ ಬೆಸ್ತರ ನಾರಿಯು । ಅಂಬೆ ಕನಸಿನೊಳರುಪಲಾಕೆಗೆ–ಸಂಭ್ರಮದಿ ಗುಡಿಗಟ್ಟಿಸಿ ॥ ದಂಭವಳಿದದ ಬುಧರಿಗೊಪ್ಪಿಸಿ–ಹಂಬಲಿಸಲತಿ ದೈನ್ಯದಿ । ಬೆಂಬಿಡದೆ ಪೂಜಿಸಲು ನಿಂತನು–ನಂಬಿ ರಾಮಕುಮಾರನು ॥

ಟಿ॥ ಗುಡಿಗಟ್ಟಿಸಿ – (ಗಂಗಾತೀರದಲ್ಲಿ) ದೇವಸ್ಥಾನವನ್ನು ಕಟ್ಟಿಸಿ. (ಈ ಪ್ರಾಂತಕ್ಕೆ ದಕ್ಷಿಣೇಶ್ವರವೆಂದು ಹೆಸರು) ಬುಧರಿಗೊಪ್ಪಿಸಿ = (ಶೂದ್ರಪ್ರತಿಷ್ಠಿತವಾದದ್ದಕ್ಕೆ ಯಾರೂ ಅರ್ಚಕರು ದೊರೆಯುತ್ತಿರಲಿಲ್ಲವಾದ್ದರಿಂದ) ಅದನ್ನು ಬ್ರಾಹ್ಮಣರಿಗೆ ದಾನಮಾಡಿ.

ಹೀಗೆ ಕೆಲವು ದಿವಸ ನಡೆದ ಮೇಲೆ—

ಷ॥ ಕೆಲವು ದಿನಗಳೊಳಣ್ಣಾ । ನಲಸಿ ಸ್ವರ್ಗವ ಸೇರೆ । ಬಲಗುಂದಿದಾ ಗದಾಧರನು ತಾನು ॥ ಬಲುಮೆಯಿಂದೇಕಾಂತ । ದೊಲವ ಬಿಗಿಹಿಡಿದು ತಾ । ತಳೆದನರ್ಚಕತನದ ಭಾರವನ್ನು ॥

ಗದಾಧರನು ಕಾಳಿಯನ್ನು ಪೂಜಿಸುವಾಗ ಆ ಮೂರ್ತಿಗೆ ಬೆಂಬಲವಾಗಿ ಬೇರೊಂದು ದಿವ್ಯ ತೇಜಸ್ಸಿರುವದೆಂದು ನೆನೆಸಿ ಅದನ್ನು ಕಾಣಬೇಕೆಂಬ ಕುತೂಹಲದಿಂದ ತನ್ನ ಮನಸ್ಸನ್ನು ಹುರಿಗೊಳಿಸಿದ್ದೆಂತೆಂದರೆ—

ಸುರಟಿ—ಆದಿತಾಳ

ಕೂಗು ಕೂಗು ಮನನೇ, ಮಾತೆಯ । ಕೂಗುವ ರೀತಿಯಲಿ ॥ ಪ ॥
ಕೂಗೆ ಕಾಳಿ ತಾಂ ಬೇಗನೆ ನಿನ್ನೆಡೆ । ಗಾಗಿ ಬಾರದೆಯೆ ಹೋಗುವಳಲ್ಲವು ॥ಅ.ಪ॥
ಮನಕಳದೆಂತುಟೆಂದು । ವಿಜನತೆ । ತನಗೆ ದೊರೆಯುತಿಹುದು ॥ ವಿನುಪ ಜಪಾಸುಮ । ವನು ಪತ್ರೆಗಳನು । ವಿನುತಭಕ್ತಿಜಂ । ದನದೊಡಗೂಡುತೆ ॥ ೧ ॥
ಮಾತೆಯ ಮೆಲ್ಲಡಿಗೆ । ನೋಡುವೊ । ಡೇತರದಿಂದೊಲಿದು ॥ ನೂತಲತಾಂತ ವ್ರಾತದಂಜಲಿಯ । ನೋತು ನೀಡುತುಂ ಕಾತರನಾಗುತೆ ॥ ೨ ॥ —(ರಾ. ವ. ಅ)

ಒಂದು ದಿನ ಅವನಿಗೆ ದೇವಿಯ ದಿವ್ಯರೂಪವು ಪ್ರತ್ಯಕ್ಷವಾಗಿದೆ !—

ಶ್ಲೋ॥ ಸಕುಙ್ಕುಮವಿಲೇಪನಾಮಲಕಚುಮ್ಬಿಕಸ್ತೂರಿಕಾಮ್ । ಸಮನ್ದಹಸಿತೇಕ್ಷಣಾಂ ಸಶರಚಾಪಪಾಶಾಙ್ಕುಶಾಮ್ ॥ ಅಶೇಷಜನಮೋಹಿನೀಮರುಣಮಾಲ್ಯಭೂಷಾಮ್ಬರಾಮ್ । ಜಪಾಕುಸುಮಭಾಸುರಾಂ ಜಪವಿಧೌ ಸ್ಮರೇದಮ್ಬಿಕಾಮ್ ॥ —(ಲ. ಸ. ಸ್ತೋ)

ಅ॥ ಜಪಿಸುವಾಗ— ಕುಂಕುಮವನ್ನು ಲೇಪಿಸಿಕೊಂಡಿರುವಂಥ, ಮುಂಗುರುಳುಗಳನ್ನು ಮುಟ್ಟುವ ಕಸ್ತೂರಿಯ ತಿಲಕವುಳ್ಳಂಥ, ಮುಗುಳುನಗೆಯಿಂದ ಕೂಡಿದ ಕಣ್ಣುಗಳುಳ್ಳಂಥ,–ಬಿಲ್ಲು, ಬಾಣ, ಪಾಶ, ಅಂಕುಶ—ಇವುಗಳನ್ನು ಹಿಡಿದಿರುವಂಥ, ಸಮಸ್ತರನ್ನೂ ಬೆರಗುಗೊಳಿಸುವಂಥ, ಕೆಂಪಗಿರುವ ಹೂವಿನ ಮಾಲೆಗಳೂ ಆಭರಣಗಳೂ ವಸ್ತ್ರಗಳೂ ಉಳ್ಳಂಥ ಜಪಾಪುಷ್ಪದಂತೆ ಶೋಭಾಯಮಾನವಾಗಿರುವಂಥ ಪಾರ್ವತಿಯನ್ನು ಸ್ಮರಿಸಬೇಕು.

ಎಂಬ ಶ್ಲೋಕದಲ್ಲಿರುವ ಮೂರ್ತಿಯನ್ನು ಕಣ್ತುಂಬ ನೋಡಿ ಆನಂದಪಟ್ಟು ಆಮೇಲೆಯೂ ಅವನು ಅದೇ ಭಾವನೆಯಲ್ಲಿ—

ಸಾ॥ ತಿನ್ನಿಸುವನು; ನೀನು ತಿನ್ನೆನುವೆಯ? ಎಂದು । ತಿನ್ನುತಿರ್ಪನು ದೇವಿಗಾಗಿ; ॥ ತನ್ನ ಪೂಜೆಯ ತಾನೆ ಮಾಡಿಕೊಳ್ಳುವನು । ತನ್ನ ಭಾವನ ತಾನೆ ನೀಗಿ ॥

ಇದಾದ ಮೇಲೆ ಅವನು ತನ್ನ ಕುಲದೈವವಾದ ಶ್ರೀರಾಮಚಂದ್ರಮೂರ್ತಿಯ ದರ್ಶನವನ್ನು ಪಡೆಯಬೇಕೆಂದು ಬಯಸಿ ತನ್ನನ್ನು ಮಾರುತಿಯಾಗಿ ಭಾವಿಸಿಕೊಂಡು—

ಷ॥ ಮರದ ಮೇಲೆ ಹತ್ತಿ ಹಣ್ಣ । ತರಿದು ತರಿದು ಹಾಕಿ ನೆಲಕೆ । ಕರದೊಳುಳಿದವುಗಳಸಕ್ಕರೆಯೊಳು ತಿನ್ನುತ ॥ ನರರ ಕಂಡರಣಕಿಸುತ್ತ । ಮರದಿ ಮರಕೆ ನೆಗೆಯುತಿರುತ । ಬರಿದೆ ಚೇಷ್ಟೆಗೆಯ್ಯುತಿರ್ದನವನು ಸಂತತ ॥

ಹೀಗಾಗಿ ಆ ಉದ್ದೇಶವನ್ನೂ ಪೂರ್ಣಮಾಡಿಕೊಂಡಿರುವಾಗ ದೈವಯೋಗದಿಂದ ಅವನಿಗೊಬ್ಬ ಸಿದ್ಧಪುರುಷನ ಸಹವಾಸವು ದೊರೆತು ಶರೀರವೆಲ್ಲ ಸೊರಗುವಷ್ಟು ಹಠಯೋಗವನ್ನೆಲ್ಲ ಮಾಡಿ ಅದರಿಂದ ತಮಗೆ ದೊರೆತ ಅನುಭವವನ್ನು ಕುರಿತು ಹಾಡಿದ ಅಭಿಪ್ರಾಯವೇನೆಂದರೆ—

ಕೇತಾರಗೌಳ—ಅಟತಾಳ

ಸಾಕು ಸಾಕಿನ್ನಿದಕೆ ಬೇರೊಂದು ಸುಖಮುಂಟೆ? । ನೇಕರಿಸಬಾರದಾತ್ಮಾನುಭವರತಿಯೆ ॥ ಪ ॥ ಪೊರಗಿಂದ್ರಿಯಗಳ ಚೇಷ್ಟೆಯನುಪೇಕ್ಷಿಸಿ ಹೃದಯ । ಸರಸಿಜದ ದಲಗತಿಯನುಳಿದ ಕಾಲದೊಳು ॥ ಮೊರೆವ ಝೇಂಕೃತಿಯ ದಶನಾದಂಗಳೆಂದೆಂಬ । ಶರಧಿಯೊಳು ಮುಳುಗಿ ಮೈಮರೆದ ಪರಿಣಾಮವೇ ॥ ೧ ॥ ಅರೆಮುಗಿದ ಕಣ್ಗಳೆರಡರ ತಾರೆಗಳ ನಡುವೆ । ತರಣಿ ಶಶಿ ಶಿಖಿಬಿಂಬ ಸೂಕ್ಷ್ಮರಂಧ್ರದೊಳು ॥ ಪೊರಪೊಣ್ಮೆ ಕೋಟಿ ಮಿಂಚುಗಳಂತೆ ಝಗಝಗಿಸಿ । ಮೆರೆವ ಬಿಂದು ಪ್ರಭೆಯ ನೋಳ್ಪ ಸಂತಸವೆ ॥ ೨ ॥ ತನುವಿನೊಳಹೊರಗಿಂತು ತೋರ್ಪ ತನ್ನನು ಕಾಂಬ । ಮನಕೆ ಚೇತನವಾಗಿ ಜಗವನೊಳಕೈದು ॥ ಇನಿತು ವಿಷಯಗಳ ಬೇರಿಟ್ಟರಿವ ಗುರುಸಿದ್ಧ । ನೆನಿಪ ಕಳೆಯಹಾನೆಂಬ ಪೂರ್ಣಾನುಭವವೆ ॥ ೩ ॥ —(ಕೈ. ಕ)

ಮಗನ ಈ ಪ್ರಕಾರದ ಸ್ಥಿತಿಯನ್ನು ನೋಡಿ ಇವನಿನ್ನು ತೀರ ನಿವೃತ್ತಿಮಾರ್ಗಕ್ಕೆ ತಿರುಗಬಹುದೆಂದು ಹೆದರಿ ತಾಯಿಯು ಹೇಗೋ ಇವನಿಗೊಂದು ಹೆಣ್ಣನ್ನು ತಂದು ಗಂಟುಹಾಕಿದಳು.

ಕೀ॥ ಮಾತೆ ತನಗೆ ಬಲುಬಗೆಯೊಳು ಹೇಳಿದ । ಮಾತ ಮೀರದೆ ಗದಾಧರನು ॥ ಸೋತು ತಾಯ್ಗೆ ಶಾರದೆಯೆಂಬಾಕೆಯ । ನೋತು ವಿವಾಹದಿ ವರಿಸಿದನು ॥

ವಿವಾಹವಾದರೂ ವಿಷಯಸುಖದ ಕಡೆಗೆ ಅವನ ಮನಸ್ಸು ಹರಿಯದೆ ಇದ್ದದ್ದರಿಂದ ಅವನು ಮತ್ತೆ ಕಲ್ಕತ್ತೆಗೆ ತನ್ನ ದೇವಾಲಯಕ್ಕೆ ಬಂದು ಅರ್ಚನೆಗೆ ನಿಂತು ಮೇಲೆ ಮೇಲೆ ಭಾವಾವೇಶವನ್ನು ಹೊಂದಿ ಕುಣಿಯುತ್ತ ಹಾಡುತ್ತಿರಲಾಗಿ ಈ ಸ್ಥಿತಿಯನ್ನು ಒಂದು ಬಗೆಯ ಬುದ್ಧಿಭ್ರಮಣೆಯಿರಬಹುದೆಂದು ಕೆಲವರು ಸಂಶಯಗೊಳ್ಳುತ್ತಿರುವಾಗ ಅವನ ಸುದೈವಪ್ರಭಾವದಿಂದ ಆತ್ಮೋನ್ನತಿಯ ಸೌಕರ್ಯಗಳು ಒಂದರ ಹಿಂದೊಂದು ಒದಗಿ ಅವನ ಯೋಗ್ಯತೆಯು ಅನ್ಯಾದೃಶವಾಗಿ ಬೆಳೆದದ್ದೆಂತೆಂದರೆ—

ಷ॥ ನೋಡಲಿದು ಭ್ರಮೆಯಲ್ಲ; ರಾಧೆಯ । ಪಾಂಡು; ಚೈತನ್ಯನ ಮನದೊಳೊಡ । ಮೂಡಿ ದಾಸ್ಥಿತಿಯಿದೆನುತರವತ್ನಾಲ್ಕುತಂತ್ರಗಳ ॥ ಬೀಡೆನಿಸಿ ರೂಪಾದಿವಿಷಯವ । ನೋಡಿ ಶಿವನೆನೆಗೈದು ಮೋಕ್ಷ ಕ್ಕೈ । ಗೂಡಿಸಿದಳಣಿಮಾದಿಸಿದ್ಧಿಯ ಭೈರವಿಯದೋರ್ವಳ್ ॥

ಹೀಗೆ ಮುಂದುವರಿದ ಗದಾಧರನು—

ಸಾಂ॥ ಅನುಕರಣದ ಶಕ್ತಿಯನು ಪಾಮರರು ಕಾಸಿ । ನೆಣಕೆಗೆ ಒಳಿಸುವರಲ್ತೆ? ॥ ಮುನಿಯಾದೀತನು ಶಾಂತದಾಸ್ಯಸಖ್ಯಾದಿಯು । ಸ್ಮನಿಯ ಸಾಧಿಸಿದನು ಮತ್ತೆ ॥

ಈ ಭಾವಗಳು ಮೈಗೂಡುವದು ಕಷ್ಟವಾದಾಗ ಅವನು ತಳಮಳದಿಂದ ಹಾಡುತ್ತಿದ್ದದ್ದು—

ಚೂ॥ ತಿಳಿಯೆ ನಾನೀಗ ಯಂತ್ರಗಳ ತಂತ್ರಗಳ, ತಿಳಿಯೆ ನಾನೀಗ ಧ್ಯಾನಗಳ ಜ್ಞಾನಗಳ, ತಿಳಿಯೆ ನಾನೀಗ ಯಮಗಳನು ನಿಯಮಗಳ, ತುಳಿವೆನಾನೆಂತು ಮೇಲ್ವರಿವ ದುರಿತಗಳ, ತಳೆವೆ ನಾನೆಂತು ಶಾಂತತೆಯ ಚಿಹ್ನೆಗಳ, ಹೇಳುವದೇನು ಬಹಳ, ಮನವೆನ್ನದತಿಚಪಲ । ಧನಸಮೃದ್ಧಿಯ ಕೊರತೆಯೊಂದು, ಸೇವೆ-ಯನುಗೈವ ಬಲವಿರದುದೊಂದು, ಕಾರ್ಯ-ವನು ಮಾಡಲಲಸಿಕೆಯದೊಂದು, ಜೊತೆಗೆ-ಘನವೆನಿಪ ಮೌಢ್ಯ ಮತ್ತೊಂದು, ನೋಡೆ-ತಿನುತಿರ್ಪವೆನ್ನನೇ ಇಂದು, ನೀನೆನ್ನ ಬಂಧು, ಕಾಪಾಡು ಬಂದು, ಇಂದು । ದಾನಧರ್ಮವ ಗೆಯ್ಯಲಿಲ್ಲ, ತಾಯೆ-ಮಾನವನು ನಾ ಪಡೆಯಲಿಲ್ಲ, ಭವದ-ಕಾನನದಿ ಬಳಲುತಿಹೆನಲ್ಲ, ನಿನ್ನ-ಗಾನಮಾಡುವ ಶಕ್ತನಲ್ಲ, ಒಲಿಪ-ಜಾಣತನವನು ತಿಳಿಯಲಿಲ್ಲ; ತಿಳಿಯೆಯಾ ನೀನು ಇದನೆಲ್ಲ । ನೀನು ಬಡವರ ಕಾಮಧೇನು, ನೀನು ದುರ್ಜನರಿಗೆ ಕೃಶಾನು, ದೀನರ ತಮಸ್ಸಿಗುರೆ ಭಾನು, ಮತ್ತೇನು । ಒಲ್ಲೆ ನಾ ಮುಕುತಿಗಿಕುತಿಗಳ, ಒಲ್ಲೆನಾ ಭಾಗ್ಯಗೀಗ್ಯಗಳ, ಒಲ್ಲೆನಾ ವಿಷಯದ ಸುಖಗಳ, ಒಲ್ಲೆ ನಾ ಕೀರ್ತಿಗೀರ್ತಿಗಳ, ನೀನೆ-ಬಲ್ಲೆಯೆನ್ನೊಳಗಣೆಣಿಕೆಗಳ । ಬರುತಿರಲಿ ಹುಟ್ಟುಸಾವುಗಳು, ಜನರು-ಜರಿಯುತಿರಲೆನ್ನ ಹಗಲಿರುಳು, ಎನ್ನೊ-ಳಿರುತಿರಲಿ ನಿನ್ನ

ನಾಮಗಳು, ಸಿಕ್ಕು-ತಿರಲಿ ಸಜ್ಜನರ ಪಾದಗಳು, ನಿನ್ನ-ಕರೆಯುತಿರಲೆನ್ನ ಹಸ್ತ ಗಳು, ಪಾಪ-ಉರಿಸು ಬೀಳಲಿ ಧಾರಿಣಿಯೊಳು, ಕಣ್ಣು-ಸಿರುಕಿಸಲಿ ನಿನ್ನ ರೂಪ ಗಳು, ನೀನು-ನೆರೆ ನಿಲ್ವುದೆನ್ನ ಹೃದಯದೊಳು ॥

ಗದಾಧರನು ಈ ಸಾಧನೆಗಳನ್ನು ನಡೆಸುತ್ತಿರುವಾಗ—

ಸಾ॥ ಮಗುವೆನುತ್ತ ರಾಮನ ನೀನರ್ಚಿಸು । ಏಂಗೆ ವಾತ್ಸಲ್ಯವ ತೋರಿ ॥ ಬಗೆಗದೊಳ್ಳಿತೆಂದರುಪಿದನದ ನಂ । ಬಿಗೆಗೊಟ್ಟು ಜಟಾಧಾರಿ ॥

ಆಮೇಲೆ—

ದಿಂ॥ ಮಧುರಭಾವಂ ತನ್ನೊಳಗೆ ತೋರಲೆಂದು । ಚದುರನಾಡಂ ರಾಧೆ ಯುವೊಲಾತನಂದು; ॥ ಮುದದಿ ತಾಂ ಕೃಷ್ಣಾಂಘ್ರಿಯನು ನೋಡಲೆಂದು । ಹದವಿದಾಯ್ತಾಗಳ್ ತರುಣನಾಗೆ ಮುಂದು ॥

ಈ ಮಧುರಭಾವಕ್ಕೆ ಅವನು ರಾಧೆಯನ್ನೇ ಆರಿಸಿಕೊಂಡದ್ದೇಕೆಂದರೆ—

ಶ್ಲೋ॥ ವಕ್ತುಂ ವಯಂ ನ ಶಕ್ತಾಃ ಸ್ನೇಹ ರಾಧಾಯಾಃ ಪ್ರೇಮಗೌರ ವಮ್ । ಯದಸ್ಯಾ ಮಾಧವಾದ್ಭೇದೋ ನ ಸ್ತ್ರ್ಯಾಕಾರಂ ವಿನೇತರಃ ॥

—(ಸು. ಲಾ)

ಅ॥ ರಾಧೆಯ ಪ್ರೇಮದ ಹೆಚ್ಚುಗಾರಿಕೆಯನ್ನು ಹೇಳುವದಕ್ಕೆ ನಾವು ಸಮರ್ಥರಲ್ಲ. ಏಕೆಂದರೆ ಅವಳಿಗೂ ಕೃಷ್ಣನಿಗೂ ಸ್ತ್ರೀತ್ವದ ಹೊರತು ಯಾವ ಭೇದವೂ ಇಲ್ಲ.

ರಾಧೆಯಾದಾಗಿನ ಅವನ ಹಂಬಲಿಕೆ—

ರ॥ ಬರುವೆಯೊ ಬಾರೆಯೊ ಹೇಳೆಲೆ ಸಖಿಯೆ । ಇರಲರಿಯೆನು ನಾನೆಲೆ ವಿಧುಮುಖಿಯೆ । ಪಳುವಿಂ ಕೇಳುವದೂದುವ ಕೊಳಲು । ಚೆಲುವಂ ಕಾದಿಹ ನೆನ್ನಂ ಕೊಳಲು । ನಿಮಗಾತನ ನುಡಿಗಳೆ ಬರಿಗತೆಯು । ನಮಗೆ ನೋಡಲವೆ ಹೃದಯವ್ಯಥೆಯು । ಒರಿದೆ ಕೇಳುವಿರಿ ಕಿವಿಯೊಳು ನೀವು । ಸ್ಫುರಿಪ ಹೃದಯ ದಿಂ ಕೇಳುವೆವಾವು । 'ಕುಂಜವು ನೀನಿಲ್ಲದೆ ಯೆಲೆರಾಧೆ । ರಂಜಿಸುವದೆ? ಬಾರಂ ತೇ ಕಾದೆ' । ಎಂದು ಹೇಳುವದು ಕೊಳಲಿನ ಧ್ವನಿಯು । ಇಂದುವದನೆ ಬಾರೆಲೆ ರಸಖನಿಯೆ ॥

—(ರಾ. ವ. ಅ)

ಟಿ॥ ಪಳು = ಅರಣ್ಯ. ಅಂತೇ = ಅದ್ದರಿಂದಲೇ.

ಇದೇ ಸಮಯದಲ್ಲಿಯೇ—

ಸಾಂ॥ ಬಂದು ತೋತಾಪುರಿ ಗೋಸ್ವಾಮಿ ಸಗುಣಗ । ಳಿಂದ ಮುಕುತಿ ಬಾರದೆಂದು ॥ ಅಂದದ ನಿರ್ಗುಣೋಪಾಸನೆಗಳ ಬಹು । ಬಂಧುರತೆಯ ಪೇಳ್ದ ನಂದು ॥

ಸಗುಣೋಪಾಸನೆಯಲ್ಲಿರುವ ದೋಷಗಳೇನೆಂದರೆ—

ಶ್ಲೋ॥ ರೂಪಂ ರೂಪವಿವರ್ಜಿತಸ್ಯ ಭವತಾ ಧ್ಯಾನೇನ ಯತ್ಕಲ್ಪಿತಮ್, । ಸ್ತುತ್ಯಾನಿರ್ವಚನೀಯತಾಖಿಲಗುರೋ ದೂರೀಕೃತಾ ಯನ್ಮಯಾ ॥ ವ್ಯಾಪಿ

ತ್ವಂ ಚ ನಿರಾಕೃತಂ ಭಗವತೋ ಯತ್ತೀರ್ಥಯಾತ್ರಾದಿನಾ, । ಕ್ಷಂತವ್ಯಂ ಜಗದೀಶ, ತದ್ವಿಕಲತಾದೋಷತ್ರಯಂ ಮತ್ಕೃತಮ್ ॥ —(ಸಂ. ಭಾಗ)

ಅ॥ ಹೆ, ಭಗವಂತ, ರೂಪವಿಲ್ಲದ ನಿನಗೆ ರೂಪವನ್ನು ಧ್ಯಾನದಲ್ಲಿ ಕಲ್ಪಿಸಿಕೊಂಡೆನು. ಅನಿರ್ವಚನೀಯನಾದ ನಿನ್ನನ್ನು ಬಾಯಿಂದ ಸ್ತೋತ್ರಮಾಡಿದೆನು. ತೀರ್ಥಯಾತ್ರಾಪ್ರವೃತ್ತಿಯಿಂದ ನಿನ್ನ ಸರ್ವವ್ಯಾಪಿತ್ವವನ್ನು ನಿರಾಕರಿಸಿದೆನು. ನನ್ನ ಈ ಮೂರು ತಪ್ಪುಗಳನ್ನು ಕ್ಷಮಿಸು.

ಗದಾಧರನು ಬಹು ಕಷ್ಟದಿಂದ ಸಗುಣವನ್ನು ದಾಟಿ ಈ ನಿರ್ಗುಣೋಪಾಸನೆಯಲ್ಲಿಯೂ ನಿರ್ವಿಕಲ್ಪಸಮಾಧಿಯನ್ನು ಪಡೆದದ್ದನ್ನು ನೋಡಿದ ತೋತಾಪುರಿಯು ಅವನಿಗೆ ಸಂನ್ಯಾಸದ ಹೆಚ್ಚುಗಾರಿಕೆಯನ್ನು ಕುರಿತು ಮನಗಾಣಿಸಿದ್ದೆಂತೆಂದರೆ—

ಶ್ಲೋ॥ ಸೂತ್ರಂ ಶಿಖಾಮಪ್ಯಪಹಾಯ ದಂಭಾ । ನ್ನರಶ್ಚತುರ್ಥಾಶ್ರಮಮಾಶ್ರಿತೋಽಪಿ ॥ ವಿಧಾಯ ಸಾಹಾಯ್ಯಕಮಸ್ಯ ಕೃಷ್ಣಃ । ಕ್ಷಿಪ್ರಂ ಸುಭದ್ರಾಪಗಮಂ ತನೋತಿ ॥ —(ಸು. ಲಾ)

ಅ॥ ಜುಟ್ಟನ್ನೂ ಜನಿವಾರವನ್ನೂ ತೆಗೆದುಹಾಕದೆ (ನರ) ಮನುಷ್ಯನು ಬರೀ ತೋರಿಕೆಗೆ ಸಂನ್ಯಾಸವನ್ನು ಗ್ರಹಿಸಿದರೂ ಕೃಷ್ಣನು ಅವನಿಗೆ ಸಹಾಯವನ್ನು ಮಾಡಿ (ಸು + ಭದ್ರ + ಅವಗಮಂ) ಒಳ್ಳೆಮಂಗಲದ ಪ್ರಾಪ್ತಿಯನ್ನು ಮಾಡುತ್ತಾನೆ. ಅರ್ಜುನನು ತೋರಿಕೆಗೆ ಸಂನ್ಯಾಸವನ್ನು ಗ್ರಹಿಸಿದರೂ ಸುಭದ್ರೆಯ ಪ್ರಾಪ್ತಿಯನ್ನು ಮಾಡಿಕೊಟ್ಟನು.

ತೋರಿಕೆಯ ಸಂನ್ಯಾಸವೇ ಹೀಗೆ ಫಲಕಾರಿಯಾಗಿರುವಾಗ ನಿಜವಾದ ಸಂನ್ಯಾಸದ ವಿಷಯವನ್ನು ಹೇಳಬೇಕಾದ್ದಿನ್ನೇನೆಂದು—

ಪ॥ ತೋತಾಪುರಿಯು ಶಾಸ್ತ್ರ । ರೀತಿಯಿಂ ಯತಿಗೆಯ್ಯೆ । ತಾತಸನೆ ತಾಂ ರಾಮಕೃಷ್ಣನೆಂದು ॥ ಪ್ರೀತಿಯಿಂ ಹೆಸರಿಡಲು । ದಾತ್ತನೆನಿಸಿರ್ದವನು । ಖ್ಯಾತಿಯಾಂತನು ಪರಮಹಂಸರೆನಿಸಿ ॥

ಹಂಸಲಕ್ಷಣವನ್ನು ಕುರಿತು ಕವಿ ಹೇಳಿರುವದೇನೆಂದರೆ—

ಶ್ಲೋ॥ ಕೃತಪರ್ಯಸ್ತಿಕಾಬನ್ಧೋ ಜಲಾಮೃತವಿವೇಚನೇ । ಯಃ ಶುಚಿಃ ಸ್ವಾತ್ಮನಾ ನಿತ್ಯಂ ಸ ದ್ವಿಜೋ ಹಂಸ ಉಚ್ಯತೇ ॥ —(ಸು. ಲಾ)

ಅ॥ ೧. (ಜಲ = ಜಡ) ಜಡವೆಂಬ ಮಾಯೆ ಮತ್ತು ಅಮೃತವೆಂಬ ಮೋಕ್ಷ—ಇವುಗಳನ್ನು ಅಥವಾ ಅನಾತ್ಮ, ಆತ್ಮ—ಇವುಗಳನ್ನು ಬೇರೆ ಬೇರೆ ಮಾಡಿ ತಿಳಿಯುವದರಲ್ಲಿ ಸೊಂಟವನ್ನು ಕಟ್ಟಿಕೊಂಡು ಆತ್ಮಜ್ಞಾನದ ಯೋಗದಿಂದ ಯಾವಾಗಲೂ ಶುದ್ಧನಾಗಿರುವ ದ್ವಿಜನು ಹಂಸನು. (೨.) ನೀರು ಮತ್ತು ಹಾಲು—ಇವುಗಳನ್ನು ಬೇರೆ ಬೇರೆ ಮಾಡಿ ತಿಳಿಯುವದರಲ್ಲಿ ಸೊಂಟವನ್ನು ಕಟ್ಟಿಕೊಂಡು ಯಾವಾಗಲೂ ಸ್ವಭಾವವಾಗಿ ಬೆಳ್ಳಗಿರುವ ಪಕ್ಷಿಗೆ ಹಂಸವೆಂದು ಹೆಸರು.

ಸಂನ್ಯಾಸದ ಲಕ್ಷಣವನ್ನು ಮತ್ತೊಬ್ಬ ಕವಿ ಹೇಳಿರುವದೇನೆಂದರೆ—

ಷ॥ ಕಡುಗುವರಿಗಳನರುವರನು ದರಿ । ಗೆಡೆದು, ಖಂಡಿಸಿ ಕಾಯಕರ್ಮದ । ದಡಿವಲೆಯ ನಖಿಳೇಂದ್ರಿಯಂಗಳ ಕಾಲು ಕಣ್ಣಿಗಳ ॥ ತೊಡಕುವಲೆಯನು ಹರಿದು, ಭವವೆಂ । ಬಡವಿಯನು ಹೊರವಂಟು, ಮಾಯೆಯ । ಕಡಲ ಕಳೆದ ಮಹಾತ್ಮನೇ ಸಂನ್ಯಾಸಿ ಕೇಳೆಂದ ॥ —(ಕ. ಭಾಗ)

ಟಿ|| ಕಡುಗುವ = ಕ್ರೂರತನವನ್ನು ತೋರಿಸುವ. ದಡಿವಲಿ = ದಪ್ಪನಾದ ಬಲಿ. ತೊಡಕುವಲಿ = ತೊಡಕಾದ ಬಲಿ.

ಪರಮಹಂಸರು ಹೀಗೆ ನಮ್ಮ ದೇಶದ ಧರ್ಮಪಂಥಗಳನ್ನೆಲ್ಲ ನಡೆದು ನೋಡಿದುದಿಷ್ಟೇ ಅಲ್ಲ—

ಷ|| ಅರುಪಲು ಗೋವಿಂದರಾಯ | ಸುರೆ ಮುಹಮ್ಮದೀಯಮತವ | ಭರದಿ
ಜಪಿಸುತಲ್ಲನೆಂಬ ಮೂಲಮಂತ್ರವ || ನೆರೆ ನಮಾಜ ಮಾಡುತಲನು | ಕರಿಸಿ
ವೇಷಭಾಷೆಗಳನು | ಮೆರೆದರದನು ಮುಗಿಸಿ ಕೊನೆಗೆ ಪಡೆದು ಫಲವನು ||

ಹೀಗೆ ತಾವು ಸಾಧನಗಳನ್ನೆಲ್ಲ ಮಾಡಿದರೆ ಮುಂದೆ ಉದ್ಧಾರಕರಾದ ಗುರುಗಳಾಗುವರೆಂಬದನ್ನು ಸೂಚಿಸುವದಕ್ಕಾಗಿ ಪೀಠಿಕೆಯಲ್ಲಿ "ಬಗೆಬಗೆಯ ಸಾಧನಂಗಳ" ಎಂದು ಮುಂತಾಗಿ ಹೇಳಿರುವರು.

ಇಷ್ಟರಲ್ಲಿ—

ಷ|| ಪತಿಯು ಕರ್ಮದ ವಶದಿ | ಯತಿಯಾದುದನು ಕೇಳಿ | ಸತಿಗೆರಡನೆಯ
ದೈವವಿಲ್ಲವೆಂದು || ಅತಿರೋಗಿಯಾದಾಕೆ | ಹಿತದಿ ಬರಲವರು ತ | ತ್ಸತಿಯನು
ಪಚರಿಸಿದರು ಕರುಣದಿಂದ ||

ನಿಜವಾಗಿ ಪತಿಯ ಸುಖಕಷ್ಟಗಳಿಗೆಲ್ಲ ತನ್ನನ್ನು ಭಾಗಿಯೆಂದು ತಿಳಿಯುವವಳೇ ಸತಿಯು—

ಶ್ಲೋ|| ನ ಕಾರ್ಯೇಷು ನ ಭೋಗೇಷು ನೈಶ್ವರ್ಯೇ ನ ಸುಖೇ ತಥಾ ||
ಸ್ಪೃಹಾ ಸ್ಯಾಚ್ಚ ಯಥಾ ಭರ್ತುಃ ಸಾ ನಾರೀ ಸುಖಭೋಗಿನೀ || —(ಸು)

ಅ|| ಗಂಡನಿಗೆ ಹೇಗೋ ಹಾಗೆ ತನಗೂ ಕಾರ್ಯಗಳಲ್ಲಿ, ಭೋಗ್ಯದಲ್ಲಿ, ಭಾಗ್ಯದಲ್ಲಿ, ಸುಖದಲ್ಲಿ ಯಾವಳಿಗೆ ಆಶೆಯಿಲ್ಲವೋ ಆ ಹೆಂಗಸು ಸುಖಪಡುವಳು.

ಈ ದಂಪತಿಗಳ ವಿವಾಹಕಾಲದಲ್ಲಿಯೂ ಪುರೋಹಿತರು ಶಾಸ್ತ್ರವಾಕ್ಯಯಂತೆ—

ವ|| ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ ||

ಅ|| ಧರ್ಮದಲ್ಲಿಯೂ ಅರ್ಥದಲ್ಲಿಯೂ ಕಾಮದಲ್ಲಿಯೂ ನಿನ್ನನ್ನು ಬಿಟ್ಟು ನಡೆಯುವದಿಲ್ಲ—ಎಂದು ಹೇಳಿಸಿದ್ದರೂ ಇವರು ತಮ್ಮ ಸೌಜನ್ಯದ ನಡೆವಳಿಕೆಯಿಂದ 'ಮೋಕ್ಷೇ ಚ' ಎಂದರೆ 'ಮೋಕ್ಷದಲ್ಲಿ ಕೂಡ' ಎಂಬ ಮಾತನ್ನು ಕೂಡಿಸುವಂತೆ ಮಾಡಿದ ಶ್ಲಾಘನೆಗೆ ಪಾತ್ರರಾಗಿದ್ದಾರೆ. ಸಾಮಾನ್ಯಪುರುಷರು ಸ್ತ್ರೀಸಾನ್ನಿಧ್ಯದಲ್ಲಿ ಬಹುಬೇಗ ವಿಕಾರವನ್ನು ಹೊಂದುವರೆಂದು ಯೋಚಿಸಿ ಯತಿಗಳು ಸ್ತ್ರೀಯರೊಡನೆ ಸೇರಿರಬಾರದೆಂದು ನಿಯಮವಿದೆ. ಯತಿಧರ್ಮವೇನೆಂದರೆ—

ಷ|| ಸಕಲಸಂಗಗಳನ್ನು ಬಿಟ್ಟು | ತ್ಸ್ವಕತೆಯೇತರರೊಳಿಲ್ಲದಿಂದ್ರಿಯ |
ನಿಕರವನು ನೆರೆ ಜಯಿಸಿ ಕಂದರ್ಪನಿಗೆ ತೊಡರಿಕ್ಕಿ || ಪ್ರಕಟಿತಾತ್ಮಧ್ಯಾನದಲಿ
ಮಾ | ಧುಕರವೃತ್ತಿಯಲಿರ್ದು ಕೈವ | ಲ್ಯಕೆ ನಡೆವ ಬಗೆಯುಳ್ಳಡದು ಯತಿ
ಧರ್ಮವಹುದೆಂದ || — (ಶ. ಭಾಗ)

ಪರಮಹಂಸರು ಸ್ತ್ರೀಯ ಸಾನ್ನಿಧ್ಯದಲ್ಲಿ ವಿಕಾರವನ್ನು ಹೊಂದದೆ ಇದ್ದದ್ದಿಷ್ಟೇ ಅಲ್ಲ. ಆಕೆಯನ್ನೇ ಆದಿಶಕ್ತಿಯೆಂಬ ಭಾವನೆಯಿಂದ ಅರ್ಚಿಸಿ—

ಶ್ಲೋ॥ ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ । ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋsಸ್ತುತೇ ॥ — (ಶ್ರೀ. ಸೂ)

ಅ॥ ಸಮಸ್ತಮಂಗಲಗಳಿಗೂ ತಾಳಿಯಂತಿರುವವಳೇ, ಮಂಗಲಕರಳಾದವಳೇ, ಸಮಸ್ತ ಇಷ್ಟಾರ್ಥಗಳನ್ನೂ ಸಾಧಿಸಿಕೊಡತಕ್ಕವಳೆ, ಶರಣರಿಗೆ ಅಭಯವನ್ನು ಕೊಡುವವಳೆ, ಈಶ್ವರನ ಪತ್ನಿಯೆ, ನಾರಾಯಣಿ, ದೇ , ನನಗೆ ನಮಸ್ಕಾರ.

ಎಂದು ಹೇಳಿ ಪುಷ್ಪಾಂಜಲಿಯನ್ನರ್ಪಿಸಿ ಹಾಡಿದ್ದೇನೆಂದರೆ—

ಕಾಂಬೋದಿ — ಝಂಪೆ

ಮನೆಗೆ ಕಳ್ಳರು ನುಗ್ಗಿ ಸೂರೆಯನು ಮಾಡುವರು; । ಮನಕೆ ಸಂಕಟವಾಗುತಿಹುದು ತಾಯೆ ॥ ಪ ॥ ಜನನಿ ನಾನೆಚ್ಚರಿಕೆಯಿಂದಿದ್ದು ನೀನೆನ್ನ । ಮನದೊಳಗೆ ನೆಲಸಿರುವೆಯಾದೊಡಂ ಹೀಗೆ ॥ ತನುವಿನಾ ಮನೆಗೀಗಳಾರು ಕಳ್ಳರು ಬಿದ್ದು । ಮನುವಿನುಗುತಿಹ ಸುಗುಣವನುವ ಕದಿಯುವರು ॥ ೧ ॥ ನಿನ್ನ ನಾಮವ ಹೊಗಳಬೇಕೆಂದು ಮನದೊಳಗೆ । ಮುನ್ನವೇ ನಿಶ್ಚಯವ ಮಾಡಿರುವೆನು; ॥ ಎನ್ನ ಸಮಯದೊಳು ನೆನಪಿಗೆ ಬಾರದುದು ನಿನ್ನ । ಗನ್ನಗತಕವೆನುತ್ತ ಲೀಗಳಾನರಿದೆ ॥ ೨ ॥ ನೀನೆನಗೆ ಕೊಡಲಿಲ್ಲ; ನಾನು ಕೊಳ್ಳಲುಮಿಲ್ಲ । ಮೇನನಾನುಣುವೆ ನಿನ್ನೀನ ನೀಯುವೆನು; ॥ ನೀನೆನಗೆ ಕೊಟ್ಟಿರಲು ನಿನ್ನ ಕೊಟ್ಟುದನೆಲ್ಲ । ನಾನಿತ್ತು ನಿನ್ನ ಪೂಜಿಸುತಿದ್ದೆನು ॥ ೩ ॥ ಸುರಸಮುಂ ಕುರಸಮುಂ ಕೀರ್ತಿಯುಮಕೀರ್ತಿಯುಂ । ಧರಣಿಯೊಳವೆಲ್ಲ ದೇವಿಯೆ, ನಿನ್ನವು; ॥ ಹಿರಿದೆನ್ನ ಮನದೊಳಗೆ ರಸಮುಕ್ಕುತಿರೆ ರಸೇ । ಶ್ವರಿಯೇತಕದನು ಭಂಗಿಸುತಿರುವೆ ಹೇಳು ॥ ೪ ॥ ಚಿತ್ತವನು ನೀನಿತ್ತು ದೇವಿ ಕಣ್ಣಿನ್ನೆಯಿಂ । ಮತ್ತಾವ ಪ್ರಸಾದವನು ಭವದೆ ಬೀಳಿಸಿದೆ; ॥ ಇತ್ತ ಜಗದೊಳು ಸುಳ್ಳ ನಿಜವೆಂದು ಕುರಸವನೆ । ಮತ್ತೆ ಸುರಸವೆನುತ್ತ ನಲಿದಾಡುತಿಹೆನು ॥ — (ರಾ. ವ, ಅ)

ಹೀಗೆ ಕಾಮಿನಿಯರ ಸೋಂಕಿನಿಂದ ದೂರರಾಗಿದ್ದಂತೆ ಕಾಂಚನದ ಸೋಕಿನಿಂದಲೂ ದೂರರಾಗಿದ್ದರೆಂದು ಕಂಡುಬಂದ ಒಂದು ಪ್ರಸಂಗವೇನೆಂದರೆ—

ಕೀ॥ ಗುರುಗಳಿಗೆಂದೊರ್ವನು ಶಯ್ಯೆಯ ಕೆಳ । ಗಿರಿಸಿ ಪೋಗೆ ರೂಪಾಯಿಯನು ॥ ಗುರುಗಳದರ ಸೋಂಕನು ಸಹಿಸದೆ ಬಲು । ಹೊರಳಿ ಕಳೆದರಾ ರಾತ್ರಿಯನು ॥

ಹೀಗೆ ಜಗತ್ತಿನಲ್ಲಿ ಸ್ಪರ್ಶವನ್ನು ಸಹನಮಾಡದಿರುವಿಕೆಯುಂಟೆಂಬುದನ್ನು ಸೂಚಿಸಿ ಒಬ್ಬ ಕವಿ ಹೇಳಿರುವದೇನೆಂದರೆ—

ಷ॥ ಮುಟ್ಟಿದರೆ ಮುನಿಯುನನು ನೀ ನೆರೆ । ಮುಟ್ಟಿ ನೋಡಲೆ ಜಡಮನವೆ, ಈ । ಪುಟ್ಟ ಬಳ್ಳಿಯ ಜಾಣ್ಮೆಯಿಂ ತಿಳಿಯಾಗಲಾದಷ್ಟು; ॥ ಮುಟ್ಟಲಸ್ಕರು

ಸಹಿಸದದು ನೀಂ । ಮುಟ್ಟಿಸಿಂ ದುಃಖವನು ಪಡೆಯುವೆ; । ಮುಟ್ಟಿನಾ ಭೋಗಗಳು ದುಃಖಾಕರಗಳೆನಿಸುವವು ॥ —(ಭಕ್ತಿ. ದೀ)

ಇದೇ ಜೀವನ್ಮುಕ್ತರ ಲಕ್ಷಣ—

ಶ್ಲೋ॥ ಯದಾ ಸಂಹರತೇ ಚಾಯಂ ಕೂರ್ಮೋಽಙ್ಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯೋ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ —(ಭ. ಗೀ)

ಅ॥ ಆಮೆಯು ತನ್ನ ಅವಯವಗಳನ್ನು ಮುದುರಿಕೊಳ್ಳುವಂತೆ ಯಾವಾಗ ಇವನು ಇಂದ್ರಿಯಗಳನ್ನು ವಿಷಯಗಳಿಂದ ಹಿಮ್ಮೆಟ್ಟಿಸುವನೊ ಆಗ ಅವನ ಬುದ್ಧಿ ನೆಲೆಗೆ ನಿಂತಿತೆಂದು ತಿಳಿಯಬೇಕು.

ಕಾಮಿನೀಕಾಂಚನಗಳಿಂದ ಹೀಗೆ ಅಲಿಪ್ತರಾದವರನ್ನು ಸಾಕ್ಷಾತ್ಪರಮೇಶ್ವರನ ಅವತಾರವೆನ್ನಬೇಕೆಂದು ಕವಿ ಹೇಳಿರುವದೇನೆಂದರೆ—

ಕಂ॥ ಪೆಣ್ಗೊಳ್ಚಿನ್ನದೊಳಂ ಬಿದಿ । ಪಣ್ಣಿದನಖಿಲರ್ಗೆ ಪಿರಿಯ ಮೋಹವ ನಕಟಾ! ॥ ಕಣ್ಣಿಂದೆಯುಮವನೀಕ್ಷಿಸ । ದಣ್ಣಂ ಮುಕ್ಕಣ್ಣನಲ್ತೆ! ನರರೂಪಧರಂ ॥ —(ನ. ಶ)

ಪರಮಹಂಸರು ಇಂಥ ಸ್ಥಿತಿಯನ್ನು ಪಡೆಯುತ್ತಲಿ—

ಸಾಂ॥ ಪನ್ನೆರಡಬುದ ಸಾಧಿಸಿ ಗುರುವಾದ ಮ । ಹೋನ್ನತಪುಷ್ಪವಿದರಳೆ ॥ ಮುನ್ನ ಬಂದವು ಶಿಷ್ಯಭೃಂಗಸಂತತಿ ಮಧು । ವನ್ನು ಸೇವಿಸೆ ನಾನಾ ಕಡೆಯಿಂ ॥

ಆತ್ಮನನ್ನು ತಾವೂ ಕಂಡು ಮತ್ತೊಬ್ಬರಿಗೂ ತೋರಿಸಬಲ್ಲ ಪರಮಹಂಸರ ಸಹವಾಸದಿಂದ ಪ್ರಾಕೃತಜನರು ಕೃತಾರ್ಥರಾದದ್ದನ್ನು ಕವಿ ವರ್ಣಿಸಿರುವದೇನೆಂದರೆ—

ಶ್ಲೋ॥ ಶುಚಿಮಾನಸಾಪಗಮ ಇಹ । ಹಂಸಸಮಾಗಮವಶಾತ್ ದ್ವಿಜೇನ್ದ್ರಾಣಾಮ್ ॥ ತದಮೃತತೃಪ್ತಾಃ ಶಾನ್ತಾಃ । ಸನ್ತೋ ವಿಹರನ್ತಿ ಕುವಲಯೇಽಥ ಸುಖಮ್ ॥ —(ಸು. ಲಾ)

ಅ॥(೧) (ಹಂಸಸಮಾಗಮವಶಾತ್) ಹಂಸದೊಡನೆ ಸೇರುವದರಿಂದ (ದ್ವಿಜೇನ್ದ್ರಾಣಾಮ್) ಪಕ್ಷಿಗಳಿಗೆ (ಶುಚಿಮಾನಸಾಪಗಮ) ಪವಿತ್ರವಾದ ಮಾನಸಸರೋವರದ ಪ್ರಾಪ್ತಿಯಾಗುತ್ತದೆ. ಇದರಂತೆ (ಹಂಸಸಮಾಗಮವಶಾತ್) ಪರಮಹಂಸರ ಸಂಬಂಧದಿಂದ (ದ್ವಿಜೇಂದ್ರಾಣಾಮ್) ಬ್ರಾಹ್ಮಣರಿಗೆ (ಸಾತ್ವಿಕರಿಗೆ) ಈ ಜಗತ್ತಿನಲ್ಲಿ (ಶುಚಿಮಾನಸಾಪಗಮ) ಮನಸ್ಸಿನ ಪವಿತ್ರಸ್ಥಿತಿಯುಂಟಾಗಿ ಅವರು ಮೋಕ್ಷದಿಂದ ತೃಪ್ತರಾಗಿ ಶಾಂತರಾಗಿ ಜಗತ್ತಿನಲ್ಲಿ ಆನಂದದಿಂದ ವಿಹರಿಸುತ್ತಿರುತ್ತಾರೆ.

ಈ ಶಿಷ್ಯಮಂಡಲಿಯಲ್ಲೆಲ್ಲ ಸ್ವಾಮಿ ವಿವೇಕಾನಂದರೆಂಬುವರೇ ಅಗ್ರಗಣ್ಯರು. ಅವರ ನಿರಿಚ್ಛೆಯ ಸ್ಥಿತಿಯನ್ನು ಹೊಗಳುವದೇನು!

ಕಂ॥ ಅಣಿಮಾದಿಗಳನು ನೀ । ಹಿಡಿಯೆನಲು ಗುರು, ಜ್ಞಾನ । ವನು ಕೊಡುವವೇ? ಇವೆಂದೆನುತ ಕೇಳಿ ॥ ನಿಸಗಿವಾತಂಕಗಳು; ಧರ್ಮಪ್ರಸಾರಕ್ಕೆ । ಘನಸಾಹ್ಯವೆನಲಿವನು ಬೇಡೆನೆಂದ ॥

ಅವರ ಬಳಿಗೆ ಅವಿಚ್ಛಿನ್ನವಾಗಿ ಹತ್ತು ದಿಕ್ಕುಗಳಿಂದಲೂ ಜನರು ಬರುವದಕ್ಕೆ ಮೊದಲಾಗಿ ಉಪದೇಶವು ಎಡಬಿಡದೆ ನಡೆದು ಕೊನೆಗೇನಾಯಿತೆಂದರೆ—

ಷ|| ಅಲಸಿಕೆಯುಂ ನೆರೆ ತೋರೆ ಶರಿರದೊಳ್ | ಒಲಿದು ಧರ್ಮದ ಶಕ್ತಿಯುನು ತಾ | ಏಳುಪಿ ಸಂತಸದಿಂ ವಿವೇಕಾನಂದಹೃದಯದೊಳು || ತಳರ್ದೆ ನಾನೆಂದು ಸುರಿ ವೇದನ | ನೊಲಿದು ಪಾಡುತ್ತುಚ್ಚರಿಯೆಸಲ್ | ಬಳಲಿಕೆಯೊಳೀ ಕಾಳಿಯುನು ನುತಿಸಿದರು ಕೊನೆಯೊಳಗೆ ||

ಆಮೇಲೆ ತಮ್ಮ ಶಿಷ್ಯಮಂಡಲಿಯ ಮೇಲೆಲ್ಲ ಒಮ್ಮೆ ಕಟಾಕ್ಷವನ್ನು ಬೀರಿ ಮಾಡಿದ ಕೊನೆಯ ಉಪದೇಶವೇನೆಂದರೆ—

ಧನ್ಯಾಸಿ—ಆದಿತಾಳ

ಸಿದ್ಧನಾಗೊ | ಮನುಜ | ಸಿದ್ಧನಾಗೊ || ಪ || ಹೊದ್ದಿ ದೇಹಗೃಹವನ ದರೊ | ಳಿದ್ದ ಜೀವಧನವನೀಗ | ಕದ್ದ ಕಾಲಚೋರನೊಡನೆ | ಯುದ್ಧವನ್ನು ಮಾಡೆ ಬೇಗ || ಅ.ಪ || ನೀನು ಭಕ್ತಿರಥವನೇರಿ | ಜ್ಞಾನತೂಣವನ್ನು ಬಿಗಿದು | ಮೌನ ಜಿಹ್ವೆಯೆಂಬ ಬಿಲ್ಗೆ | ಜಾಣಪ್ರೀತಿಗುಣವಕಟ್ಟಿ ||೧|| ಬ್ರಹ್ಮಮಯಿಯ ನಾಮವೆಂಬ | ಬ್ರಹ್ಮಶರವನೊಡನೆ ಹೂಡಿ || ರಂಹದಿಂದೆ ಗುರಿಯನೆಚ್ಚು | ಸಂ ಹರಿಸಲು ಕಾಲಖಳನ || ೨ || ಲೇಸೆನಿಸುವ ಗಂಗೆಯಾ ಪ್ರ | ದೇಶದಲ್ಲಿ ಯುದ್ಧ ಮಾಡೆ | ಜೈಸಬಹುದೆನುತ್ತಲೊರೆದ | ದಾಶರಥಿಯ ಮಾತ ಕೇಳಿ || ೩ ||

— (ರಾ. ವ. ಅ)

ಇತರ ಧರ್ಮಸ್ಥಾಪಕರಿಗೂ ಇವರಿಗೂ ವಿಶೇಷವೇನೆಂದರೆ—

ಷ|| ಹಿಂದಿನ ಮತಾಚಾರ್ಯರಿಲ್ಲಿಯು | ಮುಂದಿಯೊಳು ಮಾತ್ರವೆ ತಿಳುಹಿದ| ರ್ಗಂಥದಿಂದಾ ತಮ್ಮ ಮತನನು ಪರರ ಖಂಡಿಸುತ || ಇಂದು ಪರರನು ಖಂಡಿ ಸದೆ ನಿಜ | ದಿಂದ ಪರಧರ್ಮಗಳು ಸರ್ವೊಳ | ಗೊಂದು ಭಾಗಗಳೆನಿಸಿದರು ಪರ ದೇಶದೊಳು ಕೂಡ ||

ನಮ್ಮ ಪರಮಹಂಸರ ಹೆಚ್ಚುಗಾರಿಕೆಯನ್ನು ಒಂದೇ ಮಾತಿನಲ್ಲಿ ಹೇಳಬೇಕೆಂದರೆ—

ಸಾಂ|| ಗುರುವರ್ಯಶಂಕರರಲಘುಬುದ್ಧಿಯ ಜೊತೆ | ಗಿರೆ ರಾಮಾನುಜ ರೊಳ್ಳೆದೆಯುಂ || ಪರಮಾತ್ಮನವತಾರವಹ ರಾಮಕೃಷ್ಣರು | ಮೆರೆದರೈವತ್ತುಬ್ದ ವಿಳೆಯೊಳ್ ||

ಪರಮಹಂಸರ ಈ ನಡೆವಳಿಕೆಗಳನ್ನೆಲ್ಲ ಲಕ್ಷ್ಯದಲ್ಲಿಟ್ಟುಕೊಂಡೇ ಭಗವದ್ಭಕ್ತರು ಜಗತ್ತಿಗೆ ಉಪದೇಶಮಾಡುವಾಗ "ನಿಜವಾದ ಸಂನ್ಯಾಸಿ ಲಕ್ಷಣವ ಕೇಳಿ" ಎಂದು ಮುಂತಾಗಿ ಉಪದೇಶ ಮಾಡಿರುವರು.

# ಶ್ರೀ ಬ್ರಹ್ಮಚೈತನ್ಯರು

## ಪೀಠಿಕೆ—ಸದ್ಗುರು

---

**ನಾಟಿ—ಆದಿತಾಳ**

ಧರೆಯೊಳಗಿವನೆ ಸ | ದ್ಗುರು ಮಹಾರಾಜ || ಪ || ಶರಣೆಂದವರಿಗೆಲ್ಲ ನೆರೆ ಕಲ್ಪಭೂಜ || ಅ. ಪ || ಮನುಜಸಾಮಾನ್ಯರ ತರಗತಿಯನು ಮೀರಿ | ಮನುಜ ಜನ್ಮದಿ ಧನ್ಯತೆಯ ಪಡೆಯುದಾತ || ೧ || ಧರ್ಮದಿ ಪೇರ್ವೆರ್ಗವಡೆದ ನಡೆವಳಿಯಲಿ | ಧರ್ಮಪ್ರಚಾರದೀಕ್ಷಿತನಾದಾತ || ೨ || ಜನಕ ಸಂಸಾರದೊಳಿದ್ದಂತೆ ಕಂಡರೂ | ಮನಕದ ತರದೆ ಚಿನ್ಮಯನಾಗಿರ್ಪಾತ || ೩ ||

ತನ್ನ ಸ್ವರೂಪವು ಶರೀರ ಮೊದಲಾದವುಗಳಿಗಿಂತ ಬೇರೆಯಾದದ್ದೆಂದು ಶಾಸ್ತ್ರಗಳು ಸಾರಿ ಸಾರಿ ಹೇಳಿದರೂ ಕಿವಿಗೊಡದೆ ಶರೀರವನ್ನೆ ನಂಬಿಕೊಂಡಿರುವವರನ್ನು ನೋಡಿ ನೀತಿಶಾಸ್ತ್ರಜ್ಞರು ಕನಿಕರದಿಂದ ಹೇಳುವದೇನೆಂದರೆ—

ವೃ|| ತನುವೇಂ ತಾಮ್ರನಿವಾಸವೋ, ಮರಳ ಬೆಟ್ಟೊಳ್ಕ್ರೀಡಿ ಮೂಢಂ ಮರು | ಳ್ತನ ಮೊಂದಿರ್ಪವೊಲಿಂದೊ ನಾಳೆಯೊ ತೊಡಂಕೇಂ ಸಾಳಿದೋ ಈಗಲೋ || ಘನದೊಡ್ಡೆಂಬವೊಲೊಡ್ಡಿಯೊಡ್ಡಳಿವ ಮೆಯ್ಯೊಳ್ಮೋಸವೇಕಿರ್ದಪೈ ? | ನೆನೆದಿರ್ಜೀವನೆ, ಪೋಲನೆಂದರಿಪಿದ್ಕೈ ರತ್ನಾಕರಾಧೀಶ್ವರಾ ||

—(ರ. ಶ.)

ಟಿ|| ಮೂಢಂ—ಮೂಢಮನು. ಘನದ+ಒಡ್ಡು—ಮೇಘದ ಹರವು.

ಶರೀರೇಂದ್ರಿಯಗಳ ಸುಖಕ್ಕಾಗಿ ಆಸೆಪಟ್ಟುಪಟ್ಟು ಸಾಕಾದವನ ಬಾಯಿಂದ ಬಂದಿರುವ ಕೊನೆಯ ಮಾತೇನೆಂದರೆ—

ವೃ|| ಅಗುಳ್ದಿಂ ಸಿಕ್ಷೇಪಶಂಕಾಶಯುದೆ ಮಹಿಯು ; ಪೊನ್ನಪ್ಪುದೆಂದದ್ರಿ ಭೂಧಾ | ತುಗಳೆಲ್ಲಂ ಸುಟ್ಟೆನುರ್ವೀಶರನೊಲಿಸಿದೆನಂಬೋಧಿಯುಂ ದಾಟಿದೆಂ ; ಮೋಙ್ || ಬಗೆಯುಂ ಕಲ್ಮಾಡಿ ಮಂತ್ರಂ ಜಪಿಸೆ ಮಸಣದೊಳ್ ನೂಕಿದೇ ಸಕ್ಕಟಾ ! ರಾ | ತ್ರಿಗಳಂ ; ಕೈಸಾರ್ದುದಿಲ್ಲಂ ಕುರುಡುಕವಡೆಯುಂ ತೃಷ್ಣೆ, ಸೀಂ ತೃಪ್ತೆಯಾದೌ ||

—(ಧ. ವೈ.)

ಆದ್ದರಿಂದಲೇ ವಿವೇಕಿಗಳು ಹೇಳುವದೇನೆಂದರೆ—

ಸಾಂ|| ಘೋರಸಂಸಾರದಿ ಸಾರವೇನಿದೆ ? ಸತ್ಯ | ಸಾರವಿಚಾರವ ಮಾಡು || ವಿಷಾರಿ ವಿಷವನುಣ್ಣೆ ಸುಖವೆಂತು ಪೇಳ್ರಘು | ವೀರಧ್ಯಾನವ ಮಾಡು ಮನವೆ ||

—(ಮ. ಖ)

ಇಂಥ ಉಪದೇಶವನ್ನು ಎಷ್ಟೋ ಜನರು ಮಾಡಿದ್ದರೂ ಜನರು ಅದನ್ನು ಉಪೇಕ್ಷಿಸುತ್ತಿರುವರಲ್ಲ!

ಸೀ॥ ದೇವಪೂಜಾದಿಗಳ ಮಾಡಬೇಕೆಂಬ ಶುಕ—ದೇವತಾತನ ಮಾಡು ನಡೆಯಲಿಲ್ಲ; । ದೇವಮಹಿಮೆಗಳನಾದರಿಸೆಂದಿರುವ ಗರ್ಗ—ದೇವನುಪದೇಶ ಕಿವಿಗಿಳಿಯಲಿಲ್ಲ; । ಭಾವಿಸುತ್ತಾತ್ಮಸುಖವನು ಪಡೆಯೆ ಶಾಂಡಿಲ್ಯ—ದೇವಸೂಕ್ತಿಯು ಮನಕೆ ಹತ್ತಲಿಲ್ಲ; । ದೇವನಗಲಿಕೆ ದುಃಖಕರವೆಂದು ಹೇಳಿದಾ—ಭಾವಭಕ್ತಿಯು ಮೆದುಳಿಗೇರಲಿಲ್ಲ; ॥ ಭಾವಶುದ್ಧಿಯೆ ಇಲ್ಲದಿಹುದರಿಂದ । ಭಾವಿಸಲು ಜಾರರಾ ಪ್ರೀತಿಯಂತೆ । ದೇವಮಹಿಮೆಯನರಿಯದಧಮರಿಂದ । ಸಾವ ಪಡೆದಂತಿಹುದಿದೇನು ಚಂದ? ॥ —(ಕ. ಸಂ. ನಾ)

ಉತ್ತಮವಾದ ದೇವಾಶ್ರಯವನ್ನು ಬಿಟ್ಟು ವಿಷಯಗಳಿಗೆ ಶರಣುಹೋಗುತ್ತಿರುವದನ್ನು ನೋಡಿ ದೊಡ್ಡವರು ಹೇಳಿರುವದೇನೆಂದರೆ—

ಶ್ಲೋ॥ ಶಾಂತೇಽನಂತಮಹಿಮ್ನಿ ನಿರ್ಮಲಚಿದಾನಂದೇ ತರಂಗಾವಲೌ । ನಿರ್ಮುಕ್ತೇಽಮೃತಸಾಗರಾಂಭಸಿ ಮನಾಕ್ ಮಗ್ನೋಽಪಿ ನಾಚಾಮತಿ; ॥ ನಿಃಸಾರೇ ಮೃಗತೃಷ್ಣಿಕಾರ್ಣವಜಲೇ ಶ್ರಾಂತೋ ವಿಮೂಢಃ ಪಿಬತ್ಯಾಚಾಮತ್ಯವಗಾಹತೇಽಭಿರಮತೇ ಮಜ್ಜತ್ಯಥೋನ್ಮಜ್ಜತಿ ॥ —(ಪ್ರ. ಚಂ)

ಅ॥ ಮನುಷ್ಯನು ಶಾಂತವಾದಂಥ, ಅನಂತಮಹಿಮೆಯುಳ್ಳಂಥ, ನಿರ್ಮಲವಾದ ಚಿದಾನಂದಸ್ವರೂಪದ ಅಲೆಗಳು ತುಂಬಿರುವಂಥ, ಯಾವ ತೊಡಕೂ ಇಲ್ಲದಂಥ ಅಮೃತಸಾಗರದ ನೀರಿನಲ್ಲಿ ಒಮ್ಮೆ ಮುಳುಗಿದರೂ ಕೂಡ ಮೂಢನು ಅದಂದೊಂದು ತೊಟ್ಟನ್ನೂ ಕುಡಿಯುವದಿಲ್ಲ; ಎಷ್ಟೋ ಕಷ್ಟಪಟ್ಟು ನಿಸ್ಸಾರವಾದ ಬಿಸಿಲಗುದುರೆಯ ನೀರಿನಲ್ಲಿ ಕುಡಿಯುತ್ತಾನೆ, ಆಚಮನ ಮಾಡುತ್ತಾನೆ, ಸ್ನಾನಮಾಡುತ್ತಾನೆ, ಅದರಲ್ಲಿ ವಿಹರಿಸುತ್ತಾನೆ, ಮುಳುಗುತ್ತಾನೆ, ಆಮೇಲೆ ಏಳುತ್ತಾನೆ.

ಈ ಸ್ಥಿತಿಯನ್ನು ನೋಡಿ ಜ್ಞಾನಿಗಳು ಪರಿತಾಪಪಟ್ಟಿರುವದೇನೆಂದರೆ —

ಬಿಲಹರಿ—ಅಟತಾಳ

ಏನಾದುದೊ ಕಾಣೆ ಜನಕೆ । ಬ್ರಹ್ಮ । ಜ್ಞಾನಸಮೇತಕೆ ಸೇರದಾದುದೊ ಮನಕೆ ॥ ಪ ॥ ಕೊಳೆಮೆಯ್ಯ ತಾವೆಂಬರಲ್ಲ! । ಅರೆ । ಗಳಿಗೆಯೊಳಿದು ಬಿದ್ದುಹೋಗುವದಲ್ಲ!; ॥ ಅಳಿವಿಲ್ಲ ಪರಿಶುದ್ಧರೆಲ್ಲ । ಇದ—ತಿಳಿದು ತಿಳಿದು ಮೋಹಕೆರಗುವರಲ್ಲ! ॥ ೧ ॥ ಕರಣಪ್ರಾಣವು ಮನವೆಲ್ಲ । ಬರಿ । ಯರಿವಿಲಿ ತೋರುವ ಮಾಯೆ ಮತ್ತಿಲ್ಲ; ॥ ಬರುನಿದ್ದೆಯಲಿ ಬ್ರಹ್ಮವೆಲ್ಲ । ರಾತ್ರಿ । ಯರಿತ ಬಾವಿಗೆ ಹಗಲೇ ಬೀಳ್ವರಲ್ಲ! ॥ ೨ ॥ ತಾನು ತನ್ನದಿದೆಂಬ ಸಲ್ಲ । ದಧಿ । ಮಾಸವೊಂದೆ ಸಿಕ್ಕಿ ನೊರಗುವರಲ್ಲ! ॥ - ಆ ನಿಗಮಾಂತದ ನೊಲ್ಲ । ಕಡೆ । ಗಾಣುವರೇಕೊ! ಶಂಕರನೊರ್ವ ಬಲ್ಲ ॥ —(ಅ. ಗೀ)

ಟಿ॥ ಬರಿಯರಿವಿಲಿ—ನಿರ್ವಿಶೇಷವಾದ ಚೈತನ್ಯದಲ್ಲಿ. ಬರುನಿದ್ದೆಯಲಿ ಬ್ರಹ್ಮವೆಲ್ಲ—ಸುಷುಪ್ತಿಯಲ್ಲಿ ಬ್ರಹ್ಮವೊಂದೇ ತೋರುವದು.

ವಿಷಯಸುಖವೆಷ್ಟಿದ್ದರೇನೆಂದು ಇನ್ನೂ ಹೇಳಿರುವದೇನೆಂದರೆ—

ಶ್ಲೋ॥ ಶರೀರಂ ಸುರೂಪಂ ತಥಾ ವಾ ಕಲತ್ರಮ್ । ಯಶಶ್ಚಾರುಚಿತ್ರಂ ಧನಂ ಮೇರುತುಲ್ಯಮ್ ॥ ಮನಶ್ಚೇನ್ನ ಲಗ್ನಂ ಹರೇರಂಘ್ರಿಪದ್ಮೇ । ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಂ ? ॥ —(ಗು. ಅ)

ಅ॥ ಸುಂದರವಾದ ಶರೀರ, ಸುಂದರಿಯಾದ ಹೆಂಡತಿ, ಒಳ್ಳೇ ಮನೋಹರವಾದ ಕೀರ್ತಿ, ಮೇರುಪರ್ವತದಷ್ಟು ಹಣ—ಇಷ್ಟೆಲ್ಲ ಇದ್ದರೂ ಮನಸ್ಸು ಹರಿಯ ಪಾದವನ್ನು ಆಶ್ರಯಿಸದೆ ಹೋದರೆ ಮುಂದೇನು ಪ್ರಯೋಜನ?

ಹಾಗಾದರೆ ದೇಹಾದಿಗಳ ಮೇಲೆ ಇರುವ ಅತಿಪ್ರೀತಿಗೆ ಔಷಧವೇನೆಂದರೆ—

ಶ್ಲೋ॥ ಸಂಗಃ ಸರ್ವಾತ್ಮನಾ ತ್ಯಾಜ್ಯಃ ; ಸ ಚೇತ್ತ್ಯಕ್ತುಂ ನ ಶಕ್ಯತೇ । ಸ ಚ ಸತ್ಸು ವಿಧಾತವ್ಯಃ ; । ಸಂತಃ ಸಂಗಸ್ಯ ಭೇಷಜಮ್ ॥ —(ಸು.)

ಅ॥ ಪ್ರೀತಿಯನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು. ಬಿಡುವದಕ್ಕಾಗದಿದ್ದರೆ ಆ ಪ್ರೀತಿಯನ್ನು ಸತ್ಪುರುಷರಲ್ಲಿ ಮಾಡಬೇಕು. ಸತ್ಪುರುಷರೇ ಪ್ರೀತಿಗೆ ಔಷಧ.

ಕೆಲವರು ತೀರ್ಥಯಾತ್ರಾದಿಗಳನ್ನು ಹೇಳುತ್ತಾರಲ್ಲ ! ಎಂದರೆ—

ಶ್ಲೋ॥ ನ ಹ್ಯಮ್ಮಯಾನಿ ತೀರ್ಥಾನಿ ; ನ ದೇವಾ ಮೃಚ್ಛಿಲಾಮಯಾಃ ; । ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥ —(ಸಂ. ಭಾಗ)

ಅ॥ ಜಲಮಯವಾದವು ನಿಜವಾದ ತೀರ್ಥಗಳಲ್ಲ. ಮಣ್ಣಿನಿಂದಲೂ ಕಲ್ಲಿನಿಂದಲೂ ಮಾಡಿದವುಗಳು ನಿಜವಾದ ದೇವರಲ್ಲ. ಅವು ಬಹುಕಾಲದ ಮೇಲೆ ನಮ್ಮನ್ನು ಶುದ್ಧಿಗೊಳಿಸುವವು. ಸಾಧುಗಳು ದರ್ಶನಮಾತ್ರದಿಂದಲೆ ನಮ್ಮನ್ನು ಪವಿತ್ರರಾಗಿ ಮಾಡುತ್ತಾರೆ.

ಆ ಸಾಧುಸ್ವರೂಪರಾದ ಸದ್ಗುರುಗಳಿಗೆ ಸಮಾನರು ಜಗತ್ತಿನಲ್ಲಿ ಬೇರೆ ಇಲ್ಲ—

ಶ್ಲೋ॥ ದೃಷ್ಟಾಂತೋ ನೈವ ದೃಷ್ಟಸ್ತ್ರಿಭುವನಜಠರೇ ಸದ್ಗುರೋರ್ಜ್ಞಾನದಾತುಃ । ಸ್ಪರ್ಶಶ್ಚೇತ್ತತ್ರ ಕಲ್ಪ್ಯಃ ಸ ನಯತಿ ಯದಹೋ । ಸ್ವರ್ಣತಾಮಶ್ಮಸಾರಮ್ ॥ ನ ಸ್ಪರ್ಶತ್ವಂ ತಥಾಪಿ ಶ್ರಿತಚರಣಯುಗೇ ಸದ್ಗುರುಃ ಸ್ವೀಯಶಿಷ್ಯೇ । ಸ್ವೀಯಂ ಸಾಮ್ಯಂ ವಿಧತ್ತೇ ; ಭವತಿ ನಿರುಪಮಸ್ತೇನ ವಾ ಲೌಕಿಕೋಽಪಿ ॥ —(ಶ. ಶ್ಲೋ)

ಅ॥ ಜ್ಞಾನವನ್ನು ಕೊಡತಕ್ಕಂಥ ಸದ್ಗುರುವಿಗೆ ಈ ಮೂರು ಲೋಕದಲ್ಲಿಲ್ಲಿಯೂ ದೃಷ್ಟಾಂತವೇ ಇಲ್ಲ. ಸ್ಪರ್ಶಮಣಿಯನ್ನು ಹೇಳುವದಾದರೆ ಅದು ಕಬ್ಬಿಣವನ್ನು ಬಂಗಾರವಾಗಿ ಮಾಡುವದು ಆಶ್ಚರ್ಯವೇ ಸರಿ. ಆದರೂ ಅದು ಅದನ್ನು ಸ್ಪರ್ಶವಾಗಿಯೇ ಮಾಡಲಾರದು. ಸದ್ಗುರುವಾದರೊ ಶರಣಾಗತನಾದ ಲೌಕಿಕ ಶಿಷ್ಯನನ್ನು ತನ್ನಂತೆಯೇ ಮಾಡುತ್ತಾನೆ. ಆದ್ದರಿಂದಲೇ ಅವನಿಗೆ ಸಮಾನರಿಲ್ಲ.

ಈ ಕಾರಣದಿಂದಲೇ ಸದ್ಗುರು ಮನುಷ್ಯನಲ್ಲವೆಂದು ಸರ್ವಜ್ಞನು ಹೇಳುತ್ತಾನೆ—

ತ್ರಿ॥ ಸುರತರುವು ಮರನಲ್ಲ ; ಸುರಭಿಯೊಂದಾವಲ್ಲ ; । ಪರುಷ ಪಾಷಾಣದೊಳಗಲ್ಲ ; ಗುರುರಾಯ । ನರರೊಳಗಲ್ಲ ಸರ್ವಜ್ಞ ॥ —(ಸ. ಪ)

ಆ ಸದ್ಗುರುವಿನ ಯೋಗ್ಯತೆಯನ್ನು ಕುರಿತು ಅವನು ಅಭಿಪ್ರಾಯಪಟ್ಟಿರುವದೇನೆಂದರೆ—

ತ್ರಿ|| ಹರ ತನ್ನೊಳಿರ್ದು ಗುರು ತೋರದೆ ತಿಳಿವುದೇ ? । ಮರದೊಳಗಗ್ನಿ ಇರುತಿರ್ದು ತನ್ನ ತಾ । ನರಿಯದೇಕೆಂದ ಸರ್ವಜ್ಞ ॥ —(ಸ. ವ)

ಇದೇ ಅಭಿಪ್ರಾಯವೇ ಸೂತ್ರದಲ್ಲಿರುವದೇನೆಂದರೆ—

ಸೂ॥ ಮುಖ್ಯತಸ್ತು ಮಹತ್ಕೃಪಯೈವ —(ನಾ. ಭ. ಸೂ)

ಅ|| ಮುಖ್ಯವಾಗಿ ದೊಡ್ಡವರ ಕರುಣೆಯಿಂದಲೆ.

ಆ ಗುರುವಿನ ಅಗತ್ಯವನ್ನು ಕುರಿತು ಒಬ್ಬ ಕವಿಯು ಚಮತ್ಕಾರವಾಗಿ ವರ್ಣಿಸುವದೇನೆಂದರೆ—

ಶ್ಲೋ|| ದೇವೀಂ ವಾಚಮುಪಾಸತೇ ಹಿ ಬಹವಃ ; ಸಾರಂ ತು ಸಾರಸ್ವತಮ್ । ಜಾನೀತೇ ನಿತರಾಮಸೌ ಗುರುಕುಲಕ್ಲಿಷ್ಟೋ ಮುರಾರಿಃ ಕವಿಃ ; || ಅಬ್ಧಿರ್ಲಂಘಿತ ಏವ ವಾನರಭಟೈಃ ಕಿಂ ತ್ವಸ್ಯ ಗಂಭೀರತಾ । ಮಾಪಾತಾಲನಿಮಗ್ನ ಪೀವರತನುಃ ಜಾನಾತಿ ಮಂಥಾಚಲಃ ॥ —(ಅ. ರಾ. ನಾ)

ಅ|| ಎಷ್ಟೋ ಜನರು ವಿದ್ಯಾಭ್ಯಾಸ ಮಾಡುತ್ತಾರೆ. ಅದರ ಸಾರವು ಗುರುಕುಲವಾಸದ ಕಷ್ಟವನ್ನು ಅನುಭವಿಸಿದ ಮುರಾರಿಕವಿಗೆ ಮಾತ್ರ ಚೆನ್ನಾಗಿ ಗೊತ್ತು. ವಾನರರೆಲ್ಲರೂ ಸಮುದ್ರವನ್ನು ದಾಟಿದರು. ಆದರೆ ಆಳವು ಪಾತಾಲದವರೆಗೆ ಮುಳುಗಿದ್ದ ದೊಡ್ಡ ದೇಹವುಳ್ಳ ಮಂದರ ಪರ್ವತಕ್ಕೆ ಮಾತ್ರ ಗೊತ್ತು.

ಆದ್ದರಿಂದಲೇ—

ಶ್ರು॥ ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥ —(ಮುಂ)

ಅ॥ ಆತ್ಮಜ್ಞಾನಕ್ಕಾಗಿ ಶಿಷ್ಯನು ವೇದಶಾಸ್ತ್ರಸಂಪನ್ನನಾದಂಥ ಮತ್ತು ಬ್ರಹ್ಮನಿಷ್ಠನಾದಂಥ ಗುರುವಿನ ಬಳಿಗೇ ಸಮಿತ್ಪಾಣಿಯಾಗಿ ಹೋಗಬೇಕು.

ಇದೇ ಅರ್ಥವೇ ಸ್ಮೃತಿಯಲ್ಲಿಯೂ ಇರುವದೇನೆಂದರೆ—

ಶ್ಲೋ॥ ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ । ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ —(ಭ. ೧೬)

ಅ|| ಗುರುಗಳ ಬಳಿಗೆ ಹೋಗಿ ಅಡ್ಡಬಿದ್ದು ಪ್ರಶ್ನೆಮಾಡಿ ಸೇವೆ ಮಾಡಿದರೆ ಜ್ಞಾನಿಗಳೂ ತತ್ತ್ವವನ್ನು ಕಂಡವರೂ ಆದ ಅವರು ನಿನಗೆ ಜ್ಞಾನವನ್ನು ಉಪದೇಶಮಾಡುತ್ತಾರೆ.

ಗುರುವನ್ನು ಪಡೆದವನೇ ತಿಳಿಯುವವನೆಂಬರ್ಥವನ್ನು ಕುರಿತು ಭಾಗವತಶಿರೋಮಣಿಗಳು ಹೇಳುವದೇನೆಂದರೆ—

ಧನ್ಯಾಸಿ—ಆದಿತಾಳ

ಗುರುವಿನ ಗುಲಾಮನಾಗುವ ತನಕ । ದೊರೆಯದಣ್ಣಾ ಮುಕ್ತಿ ॥ ಪ ॥ ಪರಿ ಪರಿ ಅನೇಕ ಶಾಸ್ತ್ರವನೋದಿ ವ್ಯರ್ಥವಾಯಿತು ಬಕುತಿ ॥ ಅ. ಪ ॥ ಕೊರಳೊಳು ಮಾಲೆಯ ಧರಿಸಿದರೇನು ? । ಬೆರಳೊಳು ಮಣಿಗಳನೆಣಿಸಿದರೇನು ? ॥ ಶರೀರಕೆ ಭಸ್ಮವ ಹಚ್ಚಿದರೇನು? । ಮರುಳನಂತೆ ತಾ ತಿರುಗಿದರೇನು ? ॥ ೧ ॥ ಆರು

ಶಾಸ್ತ್ರಗಳನೋದಿದರೇನು? ನೂ | ರಾರು ಪುರಾಣವ ಮುಗಿಸಿದರೇನು? || ಸಾಧುಸಂತರ ಕಥೆ ಕೇಳಿದರೇನು? | ಧೀರಸಂತೆ ತಾ ತಿರುಗಿದರೇನು? || ೨ || ನಾರಿಯ ಭೋಗವ ಅಳಿಸಿದರೇನು? ಶರೀರಕೆ ಕಷ್ಟವ ಬಡಿಸಿದರೇನು? || ಮಾರ ಹರನ ಶ್ರೀ ಪುರಂದರವಿಠಲನ | ಸೇರಿ ಮುಕ್ತಿ ಪಡಕೊಳ್ಳುವ ತನಕ ||— (ದಾ)

ಆ ಗುರು ಹೇಗಿರಬೇಕೆಂಬದನ್ನು ಮತ್ತೊಬ್ಬರು ಸೂಚಿಸಿರುವದೇನೆಂದರೆ—

ಧನ್ಯಾಸಿ—ಏಕತಾಳ

ಗುರುವು ದೊರೆಯುಬೇಕಿಂಥವನು | ಬಹು | ದುರಿತ ನಿವಾರಿಸುವಂಥವನು || ಪ || ಪರಮಾತ್ಮನ ತೋರ್ಪಂಥವನು | ಭವ | ಶರಧಿಯ ದಾಂಟಿಸುವಂಥವನು || ಅ. ಪ. || ಕ್ರೋಧ ಬಾರದಂತಟ್ಟುವನು ಸ | ದ್ಬೋಧರೂಪ ತಾನಾದವನು || ಸಾಧಿಸಿ ಕಾಮಾದಿಗಳನು ಜಯಿಸುವ | ಹಾದಿ ತೋರಿಕೊಡುವಂಥವನು || ೧ || ಮತಭೇದಗಳಿರದಂಥವನು | ಸುಖ | ಪಥವನು ತೋರಿಸುವಂಥವನು || ಮತಿಗೆಟ್ಟವರಿಗೆ ದಯ ತೋರುತ ಸ | ದ್ಗತಿಯನು ಪ್ರೇಮದಿ ಕೊಡುವವನು || ೨ || ಹರಿಹರರೂಪಿನೊಳಿರುವವನು | ಸುರ | ನರರಿಂ ಪೂಜೆಯಗೊಳುವವನು || ಧರೆಯೊಳಧಿಕ ಗೋಷ್ಟಾಪುರದೊಳು ಶ್ರೀ | ಪರಮಶಾಂತನಾಗಿರುವವನು ||

—(ದಾ)

ಇಂಥ ಗುರು ಸಿಕ್ಕಬೇಕಾದರೆ ಅನೇಕಜನ್ಮದ ಪುಣ್ಯದ ಸಂಚಯವಿರಬೇಕು—

ಶ್ಲೋ|| ಅನೇಕಜನ್ಮಸಂಸ್ಕಾರಾತ್ಸದ್ಗುರುಃ ಸೇವ್ಯತೇ ಬುಧೈಃ; | ಸಂತುಷ್ಟಃ ಶ್ರೀಗುರುರ್ದೇವಃ ಆತ್ಮರೂಪಂ ಪ್ರಯಚ್ಛತಿ || —(ಶ. ಗೀ)

ಅ|| ಅನೇಕಜನ್ಮಗಳ ಪುಣ್ಯದಿಂದ ವಿವೇಕಿಗೆ ಸದ್ಗುರುಗಳ ಸೇವೆ ದೊರೆಯುತ್ತದೆ. ಸಂತುಷ್ಟನಾದ ಆ ಗುರುದೇವನು ಆತ್ಮಜ್ಞಾನವನ್ನುಂಟುಮಾಡಿಕೊಡುತ್ತಾನೆ.

ಇಂಥ ಸದ್ಗುರುವಿನ ಸೇವೆಯ ಫಲವೇನೆಂದರೆ—

ಶ್ರು|| ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ | ತಂ ತಂ ಲೋಕಂ ಜಾಯತೇ ತಾಂಶ್ಚ ಕಾಮಾನ್ಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ || —(ಮುಂ)

ಅ|| ಒಳ್ಳೆ ಸತ್ತ್ವಗುಣದವನು ತನಗಾಗಲಿ ಇತರರಿಗಾಗಲಿ ಆಗಲೆಂದು ಯಾವ ಯಾವ ಲೋಕವನ್ನು ಮನಸ್ಸಿನಲ್ಲಿ ಭಾವಿಸಿ ಯಾವ ಯಾವ ಬಯಕೆಗಳನ್ನು ಬಯಸುವನೊ ಆಯಾ ಲೋಕವನ್ನೂ ಆಯಾ ಬಯಕೆಗಳನ್ನೂ ಪಡೆಯುತ್ತಾನಾದ ಕಾರಣ ಅಭ್ಯುದಯವನ್ನು ಬಯಸುವವನು ಆತ್ಮಜ್ಞನನ್ನು ಪೂಜಿಸಬೇಕು.

ಆ ಸದ್ಗುರುವನ್ನು ಹೇಗೆ ಭಾವಿಸಬೇಕೆಂದರೆ—

ಶ್ರು|| ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ | ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ || —(ಶ್ವೇ.)

ಅ|| ಯಾರಿಗೆ ದೇವರಲ್ಲಿ ಹೆಚ್ಚಿನ ಭಕ್ತಿ ಇದೆಯೋ ಮತ್ತು ಅದರಂತೆ ಗುರುವಿನಲ್ಲಿದೆಯೋ ಆ ಮಹಾತ್ಮನಿಗೆ ಈ ಪ್ರಯೋಜನಗಳೆಲ್ಲ ದೊರೆಯುವವು.

ಅವರಿಗೂ ದೇವರಿಗೂ ಭೇದವೇ ಇಲ್ಲ—

ಸೂ|| ತಸ್ಮಿಂಸ್ತಜ್ಜನೇ ಭೇದಾಭಾವಾತ್ | —(ನಾ. ಭ. ಸೂ.)

ಅ|| ಅವರಿಗೂ ಸಜ್ಜನರಿಗೂ ಭೇದವಿಲ್ಲ.

ಇದೇ ಅಭಿಪ್ರಾಯವನ್ನು ಕವಿಗಳು ಹೇಳಿರುವದೇನೆಂದರೆ—

ವೃ|| ಹರನಿಂದುರ್ಪಗೆ ದೈವವೇ? ಕಿರಣಕಿಂನುಂ ಬಿಟ್ಟು ಬೇರುಂಟೆ? ಪೆ | ತ್ತರಿಗಿಂತುಂಟೆ ಹಿತರ್ಕರ್ಗಳುಂ? ಮಡದಿಯಿಂ ಬೇರಾಪ್ತರಿಸ್ಸಿರ್ಪರೇ? || ಸರಿಯೇ ವಿದ್ಯಕೆ ಬಂಧು? ಮೂರಸಿದಿರೊಳ್ಬಿಲ್ಲಾಳೆ? ಮೂಲೋಕದೊಳ್ | ಗುರುವಿಂದು ನ್ನತಸೇವ್ಯನೇ? ಹರ ಹರಾ! ಶ್ರೀ ಚೆನ್ನಸೋಮೇಶ್ವರ || —(ಸೋ. ಶ)

ಆ ಗುರುವಿನಲ್ಲಿ ಹೊರಗೆ ಸಂನ್ಯಾಸದ ಲಕ್ಷಣಗಳಿಲ್ಲದಿದ್ದರೂ ಎದ್ದುಕಾಣಬೇಕಾದ ಗುಣಗಳೇನೆಂದರೆ—

ಸೌರಾಷ್ಟ್ರ—ಆದಿತಾಳ

ಯೋಗಿಯಲ್ಲವೆ?| ಗುಪ್ತ | ಯೋಗಿಯಲ್ಲವೆ? || ಪ || ಮೋಗಣಖಿಲಮುದ್ರೆಗಳ ಸ | ರಾಗವೊಳಗೆ ತಳೆದ ಗೃಹಿಯು || ಅ. ಪ || ಶಮೆಯೆನಿಪ್ಪ ಕಚ್ಚೆ ಕಟ್ಟಿ ಶಾಂತಿಯುತ್ತರೀಯಮುಟ್ಟು | ದಮವೆನಿಪ್ಪ ಕಾವಿಯಂಬರವನು ವೇಷ್ಟಿಸಿ || ಮಮತೆಯೆಂಬ ಮನೆಯ ಬಿಟ್ಟು ಮಾಯೆಯೆಂಬ ಸತಿಯನುಳಿದು | ಸಮತೆಯೆಂಬುವಾಶ್ರಮವನು ಹೊಂದಿ ರಮಿಸುತಿರ್ಪ ಗೃಹಿಯು || ೧ || ವಿರತಿಯೆಂಬ ಭಸಿತ ತೊಡೆದು ಹರುಷವೆಂಬ ಪಾತ್ರೆಗೊಂಡು | ಗುರುಸಖೋಕ್ತಿಯೆಂಬ ಕುಂಡಲಗಳ ಭೂಷಿಸಿ || ಅರಿವೆನಿಪ್ಪ ದಂಡವಿಡಿದು ಕರುಣಯೋಗವಟ್ಟವಾಂತು | ದುರಿತಪುಣ್ಯವೆಂಬ ಪಾದುಕೆಗಳ ಮೆಟ್ಟಿ ನಿಂದ ಗೃಹಿಯು || ೨ || ಸತ್ತೆನಿಪ್ಪ ಭಿಕ್ಷ್ಮವುಂಡು ಚಿತ್ತೆನಿಪ್ಪ ಜಲವ ಮಿಸೇಂಟಿ | ತತ್ತ್ವವಿದ್ಯೆಯೆಂಬ ದೇಶಗಳನು ಚರಿಸುತೆ || ಚಿತ್ತವೆಂಬ ಗುಹೆಯೊಳೊರಗಿ ನಿತ್ಯಸುಖದ ನಿದ್ರೆಗೈದು | ಮತ್ತೆ ಭವದಪೂರ್ವ ವಳಿದು ಶ್ರೀ ಗುರುಸಿದ್ಧನೆನಿಪ ಗೃಹಿಯು|| —(ಕೈ. ಕ)

ಆ ಗುರುವನ್ನು ಸೇವಿಸುವದೆಂತೆಂದರೆ—

ಭಾ|| ಒಡಲೊಡವೆ ಮೊದಲಾದವೆಲ್ಲವ | ತಡೆಯದೊಪ್ಪಿಸಿ ಗುರುವಿನಂಘ್ರಿಯ | ಹಿಡಿದು ಭಜಿಸುತ, ಕೊಟ್ಟ ಕೆಲಸಂಗಳೊಳಗನಿತುವನು || ಬಿಡದೆ ಮಾಡುತ್ತರವನವರಿಗೆ | ಕೊಡದೆ ಭಯಭಕ್ತಿಯಲಿ ತಪ್ಪದೆ | ನಡೆಯಬಲ್ಲವನವನೆ ಶಿಷ್ಯನು ರಾಯ ಕೇಳೆಂದ || —(ಕೆ. ಭಾಗ)

ಶಿಷ್ಯನ ತನುಮನಧನಗಳನ್ನು ತನ್ನ ಸ್ವಾರ್ಥಕ್ಕೆ ಬಯಸುವವನು ಸದ್ಗುರುವಲ್ಲ—

ಶ್ಲೋ|| ಗುರವೋ ಬಹವಸ್ಸಂತಿ ಶಿಷ್ಯವಿತ್ತಾಪಹಾರಕಾಃ ; | ಸದ್ಗುರುಂ ದುರ್ಲಭಂ ಮನ್ಯೇ ಶಿಷ್ಯಹೃತ್ತಾಪಹಾರಕಮ್ || —(ಗು. ೧೯)

ಅ|| ಶಿಷ್ಯರ ಹಣವನ್ನು ಎತ್ತಿಹಾಕುವ ಗುರುಗಳು ಬಹಳ. ಶಿಷ್ಯರ ಮನಸ್ಸಿನ ಸಂಕಟವನ್ನು ಎತ್ತಿಹಾಕುವ ಗುರುಗಳು ಕಡಿಮೆ.

ಮನವನ್ನು ಧ್ಯಾನಕ್ಕೂ ಧನವನ್ನು ದಾನಧರ್ಮಕ್ಕೂ ಉಪಯೋಗಿಸಬಹುದು; ತನುವಿನ ಉಪಯೋಗವೇನೆಂದರೆ—

ತ್ರಿ|| ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ | ಮತ್ತೆ ಪಾದದ ಕೆರವಾಗಿ ಗುರುವಿನ| ಹತ್ತಿಲಿರು ಎಂದ ಸರ್ವಜ್ಞ || —(ಸ. ಪ)

ವ|| ಎತ್ತಪ್ಪೆ ಶರಣಂಗೆ, ತೊತ್ತಪ್ಪೆ ಶರಣಂಗೆ, ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲು ಕಾಯ್ದಿಪ್ಪ ಸೊಣಗನಪ್ಪೆ ಕರ್ತಾರ ನಿನಗೆ ಕರವೆತ್ತಿ ಪೊಡೆವಡುವ ಭಕ್ತರ ಮನೆಯ ಹಿತ್ತಲ ಬೇಲಿಯಾಗಿರ್ಪೆನ್ನೈ ರಮಾನಾಥ ||

—(ವೀ. ವ. ಶಾ)

ಹೀಗೆ ಬರೀ ಸೇವೆಯಲ್ಲದೆ ಶಿಷ್ಯನು ತನ್ನಲ್ಲಿಟ್ಟುಕೊಂಡಿರಬೇಕಾದ ಯೋಗ್ಯತೆಗಳೇನೆಂದರೆ—

ಶ್ಲೋ|| ಆದೌ ಸ್ವವರ್ಣಾಶ್ರಮವರ್ಣಿತಾಃ ಕ್ರಿಯಾಃ | ಕೃತ್ವಾ ಸಮಾಸಾದಿತಶುದ್ಧಮಾನಸಃ || ಸಮಾಪ್ಯ ತತ್ಪೂರ್ವಮುಪಾತ್ತಸಾಧನಃ | ಸಮಾಶ್ರಯೇತ್ಸದ್ಗುರುಮಾತ್ಮಲಬ್ಧಯೇ || —(ಅ. ರಾ)

ಅ|| ಮೊದಲು ತನ್ನ ವರ್ಣಾಶ್ರಮಕ್ಕೆ ಹೇಳಿರುವ ಕರ್ಮಗಳನ್ನೆಲ್ಲ ಮಾಡಿ ಚಿತ್ತಶುದ್ಧಿಯನ್ನು ಮಾಡಿಕೊಂಡು ಆಮೇಲೆ ಆತ್ಮಜ್ಞಾನಕ್ಕಾಗಿ ಸದ್ಗುರುವಿಗೆ ಶರಣು ಹೋಗಬೇಕು.

ಇಂಥವನಿಗೇ ಸದ್ಗುರು ಉಪದೇಶಮಾಡುವನೆಂದು ಶ್ರುತಿ ಹೇಳುವದೇನೆಂದರೆ—

ಶ್ರು|| ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ಪ್ರಶಾಂತಚಿತ್ತಾಯ ಶಮಾನ್ವಿತಾಯ | ಯೇನಾಕ್ಷರಂ ಪುರುಷಂ ವೇದ ಸತ್ಯಂ | ಪ್ರೋವಾಚ ತಂ ತತ್ತ್ವತೋ ಬ್ರಹ್ಮವಿದ್ಯಾಮ್ || —(ಮುಂ.)

ಅ|| ಚೆನ್ನಾಗಿ ಮನಸ್ಸಿನ ಶಾಂತಿಯನ್ನು ಮಾಡಿಕೊಂಡು ಮನಸ್ಸನ್ನು ಹಿಡಿಯಲ್ಲಿಟ್ಟುಕೊಂಡು ಶರಣುಬಂದು ಸೇವಿಸುವವನಿಗೆ ಜ್ಞಾನಿಯಾದ ಸದ್ಗುರು ಯಾವದರಿಂದ ಸತ್ಯವಾದ ಆತ್ಮಜ್ಞಾನವಾಗುವದೋ ಆ ಬ್ರಹ್ಮವಿದ್ಯೆಯನ್ನುಪದೇಶಿಸುವನು.

ಶಿಷ್ಯನು ಅದನ್ನು ಹೇಗೆ ಅನುಭವಕ್ಕೆ ತಂದುಕೊಳ್ಳಬೇಕೆಂದರೆ—

ಶ್ರು|| ಪಂಡಿತೋ ಮೇಧಾವೀ ಗಾಂಧಾರಾನೇವೋಪಸಂಪದ್ಯೇತ.....

—(ಛಾಂ.)

ಅ|| ಪಂಡಿತನೂ ಬುದ್ಧಿವಂತನೂ ಆದ ಒಬ್ಬನು (ತನ್ನನ್ನು ಕಣ್ಣುಕಟ್ಟಿ ಕಾಡಿನಲ್ಲಿ ಕೈಬಿಟ್ಟು ಹೋದಾಗ ಇತರರಿಗೆ ಶರಣು ಹೋಗಿ ಅವರು ತೋರಿಸಿದ ದಾರಿಯನ್ನು ತಿಳಿಯುವಷ್ಟು) ಬುದ್ಧಿಶಾಲಿಯಾಗಿ ಗಾಂಧಾರದೇಶಕ್ಕೇ ಹೋಗಿ ಸೇರಿದಂತೆ.

ಅಂಥ ಬುದ್ಧಿಶಕ್ತಿಯ ಅಗತ್ಯವೇಕೆಂದರೆ—

ತ್ರಿ|| ಕಟ್ಟಿಗೆಗಳೆರಡನ್ನು ಕಟ್ಟಿಟ್ಟರೇನಹುದು? | ಗಟ್ಯಾಗಿ ಎರಡ ಮಥಿಸಲ್ಕೆ ಬೇಗೆಯ | ಬಿಟ್ಟ ಕೊಂಡಂತೆ ಸರ್ವಜ್ಞ || —(ಸ. ಪ)

ತತ್ತ್ವಾರ್ಥವು ಅನುಭವಕ್ಕೆ ಬರುವ ಕ್ರಮವನ್ನು ಕುರಿತು ಅನುಭವಿಗಳು ಹೇಳಿರುವದೇನೆಂದರೆ—

ಯದುಕುಲಕಾಂಬೋದಿ—ಆಟತಾಳ

ಅನುಭವದಡಿಗೆಯು ಮಾಡಿ । ಅದ । ಕನುಭವಿಗಳು ಬಂದು ಸೀವೆಲ್ಲ ಕೂಡಿ ॥ ಪ ॥ ತನುವೆಂಬ ಭಾಂಡವ ತೊಳೆದು । ಕೆಟ್ಟ । ಮನದ ಜಂಜಡವೆಂಬ ಮುಸುರೆಯು ಕಳೆದು ॥ ಮನವೆಂಬ ಮನೆಯನು ಬಳಿದು । ಅಲ್ಲಿ । ಬಿಸುಗುತ್ರಿಗುಣವೆಂಬ ಒಲೆಗುಂಡ ತಳೆದು ॥ ೧ ॥ ವಿರತಿಯೆಂಬುವ ಮಡಿಯುಟ್ಟು । ಪೂರ್ಣ । ಹರಭಕ್ತಿಯೆಂಬ ಸೀರನೆ ಎಸರಿಟ್ಟು ॥ ಅರಿವೆಂಬ ಬೆಂಕಿಯ ಕೊಟ್ಟು । ಮಾಯಾ । ಮರವೆಯೆಂಬುವ ಕಾಷ್ಠಗಳನೆಲ್ಲ ಸುಟ್ಟು ॥ ೨ ॥ ಇರವೆಂಬ ಸಾಮಗ್ರಿಮಾಡಿ । ಸಾರ । ತರಮೋಕ್ಷವೆಂದೆಂಬ ಪಾಕನ ಮಾಡಿ ॥ ಹರಶರಣರು ಸವಿದಾಡಿ । ನಮ್ಮ । ಗುರುಸಿದ್ಧ ದೇವನ ಚರಣವ ಪಾಡಿ ॥ ೩ ॥ —(ಕೈ. ಕ)

ಈ ಸ್ಥಿತಿಯನ್ನು ಪಡೆಯುವದಕ್ಕೆ ನೆರವಾಗುವ ಸದ್ಗುರುವಿನ ಲಕ್ಷಣವನ್ನು ನೆನಪುಗೊಡುವದಕ್ಕಾಗಿಯೇ ಕೀರ್ತನಾರಂಭದಲ್ಲಿ 'ಧರೆಯೊಳಗಿನನೆ ಸದ್ಗುರುಮಹಾರಾಜ' ಎಂದು ಭಾಗವತಶಿರೋಮಣಿಗಳು ಹೇಳಿರುವದು. ಈ ಲಕ್ಷಣಗಳಿಗೆಲ್ಲ ಉದಾಹರಣೆಯಾಗಿ ಶ್ರೀ ಬ್ರಹ್ಮಚೈತನ್ಯಸದ್ಗುರುಮಹಾರಾಜರ ಆಖ್ಯಾನವು ಯಥಾಮತಿ ನಿರೂಪಣಮಾಡಲಾಗುವದು.

---

## ಆಖ್ಯಾನ

ಕೀ॥ ಗೋಂದಾವಲಿಯೊಳು ಕುಲಕರ್ಣಿಯು ಕುಲ । ದಂಡವೇರೆ ವಿಠ್ಠಲಭಕ್ತ ॥ ಚಂಡದಿ ಲಿಂಗೋಪಂತನೆನಿಸಿ ಸಾ । ನಂದದೊಳಿದ್ದನು ಸುಖಭೋಕ್ತ ॥

ಶುಕ್ಲಯಜುರ್ವೇದಿಯಾದ ಈತನಿಗೆ ಬಹುಕಾಲ ಮಕ್ಕಳಾಗಲಿಲ್ಲ. ಮಕ್ಕಳ ಸುಖವೆಂದರೆ—

ಶ್ಲೋ॥ ಇದಂ ತತ್ಸ್ನೇಹಸರ್ವಸ್ವಂ ಸಮಂ ಮೂಢದರಿದ್ರಯೋಃಅಚಂದನಮನೌಶೀರಂ ಹೃದಯಸ್ಯಾನುಲೇಪನಮ್ ॥ —(ಸು)

ಅ॥ ಮಕ್ಕಳೆನ್ನುವದು ಶ್ರೀಗಂಧವಿಲ್ಲದೆ ಮತ್ತು ಲಾಮಂಚವಿಲ್ಲದೆ ಬಡವರಿಗೂ ಹಣಗಾರರಿಗೂ ಒಂದೇ ಸಮವಾಗಿ ಹೃದಯಕ್ಕೆ ಅನುಲೇಪನದಂತೆ ಇರುವ ಪ್ರೇಮದ ಪರಮಾವಧಿ.

ಇಂಥ ಸಂತತಿಯನ್ನು ಪಡೆಯಲು ಲಿಂಗೋಪಂತನು ತನ್ನ ಇಷ್ಟದೇವತೆಗೆ ಶರಣುಹೋದದ್ದು-

ಪೂರ್ವಕಲ್ಯಾಣಿ—ಆದಿತಾಳ

ತಟಿತ್ಕೋಟಿನಿಭ, ಕಾಯೊ ಜಗನ್ನಾಥ, ವಿಠಲಯ್ಯ, ವಿಠಲಯ್ಯ ॥ ಪ ॥ ಭಜಿಸುವೆ ನಿನ್ನನು ಅಜಭವಸುರನುತ, । ಭಜಕಾಮರತರು, ಕುಜನಕುಠಾರ ॥ ೧ ॥ ನೀ ಕರುಣಿಸದೆ ನಿರಾಕರಿಸಲು ಎನ್ನ । ಸಾಕುವರಾರು ? ದಯಾಪರಮಾರುತಿ ॥ ೨ ॥ ಶರಣಾಗತರನು ಪೊರೆವೆನೆಂಬ ತವ । ಬಿರುದು ಕಾಯೊ ಕರಿವರದ, ಜಗನ್ನಾಥ ॥ ೩ ॥ —(ದಾ)

ಅದು ಫಲಿಸಿದ್ದು—

ಕೀ|| ಕನಸಿನೊಳಗೆ ವಿಠ್ಠಲ ಬಂದೆಂದನು । ನಿನಗೊಬ್ಬನು ಮಗನಾಗುವನು ;|| ಅನುವಿಂದವನಿಂದುದಿಸುವನೊಬ್ಬನು । ಜನರಜ್ಞಾನವ ನೀಗುವನು ||

ಆ ಸ್ವಪ್ನದಂತೆ ರಾವಜೀಪಂತನೆಂಬವನು ಹುಟ್ಟಿ ಗೀತಾಬಾಯಿಯೆಂಬಾಕೆಯನ್ನು ಮದುವೆಯಾಗಿರುವಾಗ—

ಕೀ|| ರಾವಜಿಪಂತರ ಗೀತಾಬಾಯಿಯು । ಜೀವದ ಕೂಸನೆ ಜನಿಸಿದನು || ಭಾವಿಸೆ ಮಾಘದ ಶುಕ್ಲ ದಶಮಿಯೊಳು | ಪಾವನತರರೂಪದ ಸುತನು ||

ಶಾ. ಶ. ೧೭೬೬ರಲ್ಲಿ ಅವತಾರವಾದ ಈ ಕೂಸಿಗೆ ಗಣಪತಿಯೆಂದು ನಾಮಕರಣವಾಯಿತು. ಆ ಶಿಶುವಿನಲ್ಲಿ ಕಂಡು ಬಂದ ಸೋಜಿಗವೇನೆಂದರೆ—

ಕೀ|| ಅಳುವದರಿಯದಲ್ಲದೆ ಮೂರೇ ತಿಂ । ಗಳಲಿ ರಾಮರಾಮೆಂದೆನುತ || ಇಳೆಯನೆಲ್ಲ ಸೋಜಿಗಗೊಳಿಸುತ್ತಲಿ । ಬೆಳೆಯುತಿರ್ದನಾ ಕಂದನು ತಾ ||

ಹೀಗೆ ಬೆಳೆದ ಗಣಪತಿಯು ತಾತನೊಡನೆ ಹೆಚ್ಚು ಬಳಕೆಯನ್ನು ಹೊಂದಿ ಭಜನೆ, ದೇವತಾರ್ಚನೆ- ಮೊದಲಾದುವುಗಳಲ್ಲಿ ತೊಡಗುತ್ತ ಉಪನಯನವಾದರೂ ಕೂಡ ಇತರರಂತೆವಿದ್ಯೆಯನ್ನು ಕಲಿಯದೆ ಹೇಳುತ್ತಿದ್ದದ್ದೇನೆಂದರೆ—

ಕೀ|| ಕಲಿಯಲಾರೆ ಪಾಠವನೊಂದೊಂದನು ; । ಕಲಿವುದೊಮ್ಮೆಗೇ ಎಲ್ಲವನು ; || ತಿಳಿಯಿತು ನಿನಗೆನೆ ತಿಳಿದಿರಬೇಕದು ;। ತಿಳಿಸಲಿಂತು ಕಲಿಯುವೆನದನು ||

ಇದೇ ಬಗೆಯ ಅಭಿಪ್ರಾಯವು ಶ್ರುತಿಯಲ್ಲಿ ಬಂದಿರುವದೇನೆಂದರೆ—

ಶ್ರು|| ಯೋಽನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ || —(ಛಾಂ)

ಅ|| ಯಾವದನ್ನು ತಿಳಿದರೆ ಕೇಳದೆ ಇದ್ದದ್ದನ್ನೆಲ್ಲ ಕೇಳಿದಂತೆಯೂ ತಿಳಿಯದೆ ಇದ್ದದ್ದೆಲ್ಲ ತಿಳಿದ ಹಾಗೆಯೂ ಆಗುವದೊ (ಅದನ್ನು ತಿಳಿದೆಯಾ ? ಎಂದು ತಂದೆಯು ಮಗನನ್ನು ಕೇಳಿದ್ದಾನೆ)

ಗಣಪತಿಯು ಹೀಗಿರುವಾಗ—

ದಿ೦|| ಮುದುಕರಾ ಲಿಂಗೋಪಂತವರ್ಯರಾಗ । ಚದುರಪೌತ್ರಂಗಂ ಮದುವೆಗೈದು ಬೇಗ || ಪದುಳದಿಂದೆಲ್ಲಾ ಬಂಧುವರ್ಗವನ್ನು । ಮುದವಗೊಳಿಸಿರ್ದರ್ ಬಂದ ಸರ್ವರನ್ನು ||

ಇದಾಗುತ್ತಲೆ ಲಿಂಗೋಪಂತರು ಸ್ವರ್ಗಸ್ಥರಾದರು. ಇತ್ತ ಗಣಪತಿಯು ತನ್ನ ಮನಸ್ಸಿನಲ್ಲಿ ಹಂಬಲಿಸುತ್ತಿದ್ದದ್ದೇನೆಂದರೆ—

ಯಮುನಾಕಲ್ಯಾಣಿ—ಆದಿತಾಳ

ಮುರಾರಿಯನು ಕೊಂಡಾಡು । ಎಲೆಮನ || ಪ || ಕಾಲನ ದೂತರು ಕಾಲಿಗೆ ಬಿದ್ದರೆ | ನಾಳೆಗೆ ನಿಲುವರೆ ? ನೋಡು | ಎಲೆ ಮನ || ೧ || ಮುಂದಿಯ ಮಾತಿಗೆ ಎಂದೆಂದು ಮರುಗದೆ । ಮುಂದಿನ ಗತಿಯ ನೀ ನೋಡು | ಎಲೆಮನ || ೨ || ಸಾಧುಸಜ್ಜನಸಂಗ ಸಾರವಾಗಿದೆ; ಮಹಾ | ಯೋಗಿಗಳೊಡನಾಡ

ಲೀಳು । ಎಲೆ ಮನ ॥ ೩ ॥ ಸತ್ಯವ ಬಿಡದಿರಸತ್ಯವನಾಡದಿರು । ಮುಕ್ತ್ಯಾಂಗನೆ ಯೊಳೊಡಗೂಡು । ಎಲೆಮನ ॥ ೨ ॥ ರಾಜೀವಮುಖಿಯರ ಸೋಜಿಗೆ ಮರು ಗದೆ । ವಿಜಯವಿಠ್ಠಲನೊಳಾಡು । ಎಲೆ ಮನ ॥ ೫ ॥ —(ದಾ)

ಹೀಗೆ ಯೋಚಿಸಿ—

ಕೀ॥ ತಂದೆತಾಯಿಗಳಿಗೆ ತಿಳಿಸದೆ ಗುರುವನು । ಸಂಧಿಸುವಿಚ್ಛೆಯ ವೇಗ ದಲಿ ॥ ಬಂದನಾಗ ಕರವೀರಕ್ಷೇತ್ರಕೆ । ಮುಂದುವರಿಯೆ ತಾ ಯೋಗದಲಿ ॥

ಅಷ್ಟರಲ್ಲಿ ತಂದೆಯು ಹುಡುಕಿಕೊಂಡು ಬಂದು ಹಿಂದಕ್ಕೆ ಕರೆದುಕೊಂಡು ಹೋಗಲು ಮತ್ತೆ ತಪ್ಪಿಸಿಕೊಂಡು ಹೊರಟು ಕ್ಷೇತ್ರಗಳನ್ನು ಸುತ್ತುತ್ತ ಹಂಬಲಿಸಿದ್ದು—

ಕಂ॥ ಅಲಸದೆ ನಾಲ್ಕುಂ ಗತಿಯೊಳ್ । ಬಳಲಿಸಿದೆನ್ನೊಂದು ಚಿತ್ತವೃತ್ತಿಯ ಪರಿಯಂ ॥ ತೊಲಗಿಸಿ ತನ್ನೊಳ್ನಿಲಿಸುವ । ಸುಲಭತೆಯಂ ಬಿಡದೆ ನೆನೆವುದೆನಗೆಂದ ಹುದೋ ? ॥ ೧ ॥ ಒಂದಿದ ವಿಷಯಕಷಾಯದ । ದಂದುಗವಂ ಕಿಡಿಸಲಿರ್ಪ ಪರಮಾನಂದಂ ॥ ಬಂದು ನೆಲೆಗೊಳಿಸುವಂದದ । ಚಂದಂಗಳ ಬಿಡದೆ ನೆನೆವುದೆನ ಗೆಂದಹುದೋ ? ॥ ೨ ॥ —(ಜಿ. ಸ್ತು)

ಈ ಹಂಬಲಿಕೆ ಪರಿಪಕ್ವವಾಗಲು—

ಸಾ ॥ ಅಬುಗಿರಿಗುಹೆಯೊಳಗಿದ್ದ ಮುನೀಂದ್ರರ । ವಿಭುಪನ ಚರಣವ ಸೇರಿ ॥ ಶುಭಸಾಧನಗಳ ಮುಗಿಸಿದನೆಲ್ಲರ । ಪ್ರಭುವೆನೆ ಸಿದ್ಧಿಯ ತೋರಿ ॥

ಟಿ॥ ಅಬುಬೆಟ್ಟವು ರಾಜಪುತ್ರಸಂಸ್ಥಾನದಲ್ಲಿದೆ.

ಇದರಿಂದ ಚಿತ್ತಶುದ್ಧಿಯನ್ನು ಪಡೆದು ಮುಂದೆ ಬಯಸಿದ್ದು—

ಕಂ॥ ಜಡಿದುಂ ದುಡಿದುಂ ತಮ್ಮೊ । ಳ್ನಡೆಯಂ ಪಡಿದೋರಿ ಜಡರನೊ ಯ್ವನೆ ಕೃಪೆಯಿಂ ॥ ಕಿಡದೆಡೆಗೆಯ್ದಿಪ ಸಾಧುಗ । ಳಡಿದಳಿರ್ಗಳ್ ಕಿಡಿಸುಗೆಮ್ಮ ಜನ್ಮಶ್ರಮಮಂ ॥ —(ಶ್ರೀ. ಅ)

ಅಂಥ ಗುರುವನ್ನು ಹುಡುಕುತ್ತ ಬಂದು ಹೈದರಾಬಾದ್ ಸಂಸ್ಥಾನದಲ್ಲಿ ಏಳೆಗಾಂವ್ ಎಂಬೂರಲ್ಲಿದ್ದ ಬ್ರಾಹ್ಮಣಸಾಧುಶ್ರೇಷ್ಠರಾದ ತುಕಾರಾಮರಿಗೆ ಶರಣುಬಂದದ್ದು—

ಭಾ॥ ಪರಮಶಾಂತಿಯೆ ಕಾಮಧೇನುವು; । ಪರಮಹರ್ಷವೆ ಕಲ್ಪ ವೃಕ್ಷವು ; । ಪರಮವಿರತಿಯೆ ಮೆರೆವ ಚಿಂತಾಮಣಿಯು; ತಾನೆಂದು ॥ ನಿರುತ ವೀ ಪರಿಯಿಂದ ತಿಳಿದಾ । ಚರಿಪ ಪಾವನಮತಿಯ ಕರುಣಿಸಿ । ಗುರುವೆ, ಪರಮಾ ದರದಿ ಪಾಲಿಪುದೆಮ್ಮ ನಟವೀಶ ॥ —(ಗು. ಭ. ಸಾ)

ಹೀಗೆ ಶರಣು ಹೋಗಿ ಕೆಲವು ದಿವಸ ಅವರ ಸೇವೆಯನ್ನು ಮಾಡಿಕೊಂಡಿದ್ದು ಒಂದು ದಿನ ಅವರು ಪ್ರಸನ್ನರಾಗಿರುವಾಗ ಬೇಡಿಕೊಂಡದ್ದು—

ಮುಖಾರಿ—ಆದಿತಾಳ

ಗುರುವಪ್ಪ ಪೊರೆಯನ್ನ । ಕರುಣದಿ ನೋಡಿ ॥ ಮರೆಯೆನ್ನ ಅಪರಾಧ । ಚರಣವ ಪಿಡಿವೆ ॥ ಪ ॥ ಎಲ್ಲಿಂದ ಬಂದುದೀ । ಇಲ್ಲದ ಮಾಯೆ ॥ ಸಲ್ಲದ ಕಾರ್ಯವ।

ನೆಲ್ಲ ಗೈಸಿದುದು ||೧|| ನಿನ್ನ ಬೋಧೆಯ ವಿಚಾರು | ತನ್ನಾವ ಭಜಿಸಿ || ಕುನ್ನಿಯಾದೆನು ; ದೇವ, | ಮನ್ನಿಸೀ ತಪ್ಪ ||೨|| ಮನೆಮಾರು ಧನವೆಂದು | ತನಯರಿವರೆಂದು || ಕನಸ ನಾ ನಿಜವೆಂದೇ | ನೆನೆಸಿದೆನಯ್ಯೋ! ||೩|| ನಿತ್ಯಾನಂದನು ನೀನು | ಮರ್ತ್ಯನಲ್ಲೆಂಬ || ಸತ್ಯೋಪದೇಶವ | ನೊತ್ತರಿಸಿದೆನು ||೪|| ಪರಿಪರಿ ಬಳಲಿ ಸಂ | ಸರಣನಾಟಕದಿ || ಕೊರಗಿ ಬಂದಿಹೆನೈ ; ಶಂ | ಕರನೇ, ಶರಣೆಂದು || —(ಅ. ೧೯)

ಆಗ ತುಕಾರಾಮರು ಯೋಚಿಸಿದ್ದು—

ಶ್ಲೋ|| ಸದ್ಬುದ್ಧಿಃ ಸಾಧುಸೇವೀ, ಸಮುಚಿತಚರಿತಸ್ತತ್ತ್ವಬೋಧಾಭಿಲಾಷೀ, | ಶುಶ್ರೂಷುಸ್ತ್ಯಕ್ತಮಾನಃ, ಪ್ರಣಿಪತನಪರಃ, ಪ್ರಶ್ನಕಾಲಪ್ರತೀಕ್ಷಃ, || ಶಾಂತೋ, ದಾಂತೋಽನಸೂಯಃ, ಶರಣಮುಪಗತಶ್ಶಾಸ್ತ್ರವಿಶ್ವಾಸಶಾಲೀ, | ಶಿಷ್ಯಃ ಪ್ರಾಪ್ತಃ ಪರೀಕ್ಷ್ಯಂ ಕೃತವಿದಭಿಮತಂ ತತ್ತ್ವತಃ ಶಿಕ್ಷಣೀಯಃ || —(ಸು)

ಅ|| ಆಸ್ತಿಕ್ಯ ಬುದ್ಧಿಯುಳ್ಳವನೂ ಸಜ್ಜನರನ್ನು ಸೇವಿಸಿದವನೂ ಒಳ್ಳೆ ನಡೆನುಡಿಯುಳ್ಳವನೂ ಪರಮಾತ್ಮಸ್ವರೂಪವನ್ನು ತಿಳಿಯಲಿಚ್ಛಿಸುವವನೂ ಗುರುಗಳ ಉಪದೇಶವನ್ನು ಕೇಳಬೇಕೆನ್ನುವವನೂ ತಾನೇ ಜಾಣನೆಂಬ ಅಹಂಕಾರವಿಲ್ಲದವನೂ ಗುರುವಿಗೆ ಶರಣು ಹೋಗುವದೊಂದೇ ಗತಿಯೆಂದು ತಿಳಿದವನೂ ಪ್ರಶ್ನೆಮಾಡುವ ಸಮಯವನ್ನು ನಿರೀಕ್ಷಿಸುತ್ತಿರುವವನೂ ಮನಸ್ಸನ್ನು ಬಿಗಿ ಹಿಡಿದವನೂ ಇಂದ್ರಿಯಗಳನ್ನು ಹರಿಯಗೊಡದವನೂ ಅಸೂಯೆ ಇಲ್ಲದವನೂ ಮರೆಹೊಕ್ಕವನೂ ಶಾಸ್ತ್ರದಲ್ಲಿ ನಂಬಿಕೆಯುಳ್ಳವನೂ ಆದ ಶಿಷ್ಯನು ಬಂದರೆ ಅವನನ್ನು ಪರೀಕ್ಷಿಸಿ ಯಥಾರ್ಥವನ್ನು ತಿಳಿಸಬೇಕು.

ಹೀಗೆ ಯೋಚಿಸಿ ಗುರುವಿನ ಮಾತನ್ನು ಎಷ್ಟರಮಟ್ಟಿಗೆ ಗೌರವಿಸುವನೆಂಬದನ್ನು ನೋಡುವದಕ್ಕಾಗಿ ಒಂದು ದಿನ ಕೋಪವನ್ನು ತೋರಿಸುತ್ತ ತಮ್ಮ ಏಕಾಂತಸ್ಥಲದಿಂದ ಹೊರಬಿದ್ದು ಹೇಳಿದ್ದು—

ಕೀ|| ಕೆಡಲು ತಪವು ಗದ್ದಲವನು ಗೈದೀ | ಹುಡುಗನನಿಲ್ಲಿಯೆ ನೀ ಹೂಳು ||

ಮುಂದೆ ನಡೆದದ್ದೇನೆಂದರೆ—

ಕೀ|| ನುಡಿಯೆ ಹಿಂದೆಯೇ ನಡೆಸಲು ಗಣಪತಿ | ಬಿಡದೆದ್ದಿತ್ತುಳಿದರ ಗೋಳು ||

ಆ ಗದ್ದಲವನ್ನು ಕೇಳಿ ಊರಿನವರು ಬಂದು ಗಣಪತಿಯನ್ನು ಹೊಡೆಯುವದಕ್ಕಾರಂಭಿಸಲು ಗಣಪತಿಯು—

ಭ|| ಗುರುಮಹಾರಾಜ ಗುರು ಜಯ ಜಯ ಪರಬ್ರಹ್ಮಸದ್ಗುರು

ಎಂದು ಅದನ್ನು ಸೈರಿಸಿಕೊಳ್ಳಲು ಅಷ್ಟರಲ್ಲಿ ತುಕಾರಾಮರು ಬಂದು ಹೂಳಿದ್ದ ಹುಡುಗನನ್ನು ಬದುಕಿಸಿ ಜನರನ್ನು ಸಂತಯಿಸಿ ಗಣಪತಿಯ ತಲೆಯಮೇಲೆ ವರದಹಸ್ತವನ್ನು ಇಡುತ್ತಲಿ ಗಣಪತಿಯು ಕೃತಾರ್ಥನಾಗಿ ಹೇಳಿದ್ದು—

ತ್ರಿ|| ಜೀಯ ಸದ್ಗುರುನಾಥ, ಕಾಯ ವುಸಿಯೆನೆ ತೋರಿ | ಮಾಯಾಪಾಶವ ಹರಿಸುತ್ತ ಶಿಷ್ಯಗೆ | ತಾಯಿಯಂತಾದೆ ಸರ್ವಜ್ಞ || —(ಸ. ಪ)

ಅಷ್ಟೇ ಅಲ್ಲವೆಂದು ಅವನು ಇನ್ನೂ ಹೇಳಿದ್ದು —

ಸೌರಾಷ್ಟ್ರ—ಅಟತಾಳ

ಧನ್ಯ ನಾನಾದೆನು ಕೃತಕೃತ್ಯನಾದೆನು । ಇನ್ನೇನಿನ್ನೇನು ॥ ಪ ॥ ಮಾನ್ಯನು ಮಾನಿತವಂದ್ಯ ನಾನಾದೆನು ಇನ್ನೇ.... ॥ ಅ. ಪ ॥ ಸದಯಸದ್ಗುರು ಕೃಪಾ । ಸುಧೆಯೊಳು ಮುಳುಗಿದೆನಿನ್ನೇ.... ॥ ಹೃದಯದ ಗಂಟುಗಳಿದೆ ಬಿಚ್ಚಿ ಕಳೆದಿದೆ ಇನ್ನೇ.... ॥ ೧ ॥ ಪಾಪಪುಣ್ಯಗಳೆಂಬ ಪಾಶವು ಹರಿಯಿತು ಇನ್ನೇ.... । ತಾಪತ್ರಯವೆಂಬ ತ್ರಾಸವು ತೀರಿತು ಇನ್ನೇ.... ॥ ೨ ॥ ಸರ್ವಸಂಶಯಗಳು ಸರಿದವು ಕೆಲಕೀಗಳಿನ್ನೇ.... । ಶರ್ವಶಂಕರದೇವ ದರುಶನದೊಲವಾಗಲಿನ್ನೇ.... ॥ ೩ ॥

—(ಅ. ೧೯)

ಆಮೇಲೆ ಗುರುಗಳಿಂದ 'ಬ್ರಹ್ಮಚೈತನ್ಯರು' ಎಂಬ ಗುರುಪುತ್ರನಾಮಧೇಯವನ್ನು ಹೊಂದಿ ಅವಧೂತರಾಗಿ ಕಾಶಿಯಲ್ಲಿ ಗಂಗಾತೀರದಲ್ಲಿದ್ದಾಗ ಅಲ್ಲಿ ದಹನಕ್ಕೆ ಬಂದ ಒಬ್ಬ ಸ್ತ್ರೀಯ ಶವವನ್ನು ನೋಡಿ ಅಳುತ್ತಿರುವ ಮಗುವಿನ ಮೇಲಿನ ಕನಿಕರದಿಂದ ಮನಸ್ಸು ಕರಗಿದ್ದು —

ಶ್ಲೋ॥ ಸಜ್ಜನಸ್ಯ ಹೃದಯಂ ನವನೀತಂ । ಯದ್ವದಂತಿ ಕವಯಸ್ತದಲೀಕಮ್ ; ॥ ಅನ್ಯದೇಹವಿಲಸತ್ಪರಿತಾಪಾ । ತ್ಸಜ್ಜನೋ ದ್ರವತಿ ನೋ ನವನೀತಮ್ ॥

—(ಸು)

ಅ॥ ಸಜ್ಜನರ ಹೃದಯವು ಬೆಣ್ಣೆಯಂತಿರುವದೆಂದು ಕವಿಗಳು ಹೇಳುವದು ಸರಿಯಲ್ಲ. ಏಕೆಂದರೆ ಸಜ್ಜನರು ಮತ್ತೊಬ್ಬರ ದೇಹದಲ್ಲಿ ಆದ ತಾಪದಿಂದ ಕರಗುತ್ತಾರೆ. ಬೆಣ್ಣೆ ಹಾಗಲ್ಲ.

ಶ್ರೀ ಬ್ರಹ್ಮಚೈತನ್ಯರು ಆಗ—

ದಿಂ॥ ಬಂದು ಜೀವಿಸೆಗೈದಾಗಳಾಕೆಯನ್ನು । ಕಂಡಗುಂ ನೀಡುತ್ತಾಗ ಹರ್ಷವನ್ನು ॥ ಅಂದು ಪೊಕ್ಕತಾರ್ಥವಾಗ ಗಂಗೆಯನ್ನು । ಮುಂದೆ ನೋಡುತ್ತಾ ಮುಂದಿ ಬರುವದನ್ನು ॥

ಸಾಧುಗಳ ಸ್ವಭಾವವೆಂತಿರುವದೆಂದರೆ—

ಶ್ಲೋ॥ ಭಜಂತಿ ಯೇ ಯಥಾ ದೇವಾನ್ ದೇವಾ ಅಪಿ ತಥೈವ ತಾನ್ ; । ಛಾಯೇವ ಕರ್ಮಸಚಿವಾಃ ; ಸಾಧವೋ ದೀನವತ್ಸಲಾಃ ॥ —(ಸಂ. ಭಾಗ)

ಅ॥ ದೇವತೆಗಳು ತಮ್ಮನ್ನು ಯಾರು ಹೇಗೆ ಭಜಿಸುತ್ತಾರೊ ಅವರಿಗೆ ಹಾಗೆ ಫಲಪ್ರದರಾಗುತ್ತಾರೆ. ದೇವತೆಗಳು ನೆರಳಿನಂತೆ ಕರ್ಮವನ್ನು ಹಿಂಬಾಲಿಸುವವರು. ಸಾಧುಗಳು ದೀನರನ್ನು ಮಕ್ಕಳಂತೆ ಕಾಣುವವರು.

ಶ್ರೀ ಬ್ರಹ್ಮಚೈತನ್ಯರು ದಹನಕ್ಕೆ ಬಂದಿದ್ದ ಶವವನ್ನು ಬದುಕಿಸಿ ತಾಯಿಯ ದರ್ಶನಕ್ಕೆಂದು ಊರಿಗೆ ಬಂದು ತನ್ನನ್ನು ಗುರುತುಹಿಡಿಯದೆ ಇದ್ದ ತಾಯಿಗೆ ಹೇಳಿದ್ದು —

ನಾದನಾಮಕ್ರಿಯೆ–ಏಕತಾಳ

ಮಾಡಿದನೆನ್ನ ಪಕೀರನ । ಸದ್ಗುರು । ಮಾಡಿದನೆನ್ನ ಪಕೀರನ ॥ ಪ ॥ ನೋಡಲಚ್ಚರಿಯಾದ ಪ್ರಪಂಚವ ಕಳೆದು ನಾಮರೂಪಕೆ ದೂರನ ॥ ಅ. ಪ ॥ ಆಸು

ಘವಕಪ್ಪುರ ಹೃದಯದ ಜೋಳಿಗೇ ಎನ್ನಯ ಕಂಕುಳೊಳಿಟ್ಟು || ಅಸಮಿಷ ದೃಷ್ಟಿಯ ಅರಿವಿನ ಕಪ್ಪವು | ಅಮೃತಕಮಂಡಲು ಕೊಟ್ಟು ||೧|| ನಾದದ ಕಿನ್ನರಿ ಧೈರ್ಯದ ತಾರಿಯು ನಿಸ್ಸಂಗಟೊಪ್ಪಿಯನಿಟ್ಟು || ಬೋಧದ ಗಂಗೆಯು ನಿರ್ಗುಣಾಲುಂಗಿಯು ಸ್ವೈರಣೆಗುಟಕಿಯ ಕೊಟ್ಟು ||೨|| ಈ ಪರಿಯಲಿ ಬಯಲಾದುದು ಹಿಡಿಯೆಂದು | ಕರವನು ನೆತ್ತಿಯೊಳಿಟ್ಟು || ಭೂಪಚಿದಾನಂದ ಪಕೀರನಾಗೆಂದೆನ್ನ ತಿರುಗೆಂದಪ್ಪಣೆ ಕೊಟ್ಟು || —(ದಾ)

ಊರಲ್ಲಿ ಕೆಲವು ದಿವಸವಿದ್ದು ಆಮೇಲೆ ಹೆಂಡತಿಯೊಡನೆ ರಾಮಭಕ್ತಿಯನ್ನು ಪ್ರಸಾರ ಮಾಡುತ್ತ ಅನೇಕ ಕ್ಷೇತ್ರಗಳನ್ನು ಸಂಚರಿಸಿದ ಮೇಲೆ—

ಕೀ|| ಪಿತನಳಿದುದು ಸಾಲದೆ ಕೆಲದಿನದೊಳೆ | ಸತಿಯುಮುಳಿಯಲಾ ಗುರುರಾಯ || ಸುತಗೆ ಸುತನ ತಾಯ್ ಬಯಸಲೆರಡನೆಯ | ಸತಿಯು ಪಡೆದ ರೊಪ್ಪಿಸೆ ತಾಯ ||

ಆ ಎರಡನೆಯ ಪತ್ನಿ ಹುಟ್ಟುಗುರುಡಿಯಾಗಿದ್ದರೂ—

ಕೀ|| ರಾಮದಾಸರಾ ದಿನ ತಾಯ್ಗೆಂದುದ | ನೇಮದಿ ನಡೆಸಿದರೆಂಬಂತೆ || ರಾಮದಾಸಿಪಂಥದೊಳಿರ್ದಿಬ್ಬರ | ಕಾಮಿಸಿದರು ತಾವ್ಪೋರಂತೆ ||

ಆಮೇಲೆ ಅಯೋಧ್ಯೆಯಿಂದ ತಂದಿದ್ದಂಥ ಶ್ರೀ ಸೀತಾರಾಮಲಕ್ಷ್ಮಣರ ವಿಗ್ರಹಗಳನ್ನು ಮನೆಯಲ್ಲಿಯೇ ಸ್ಥಾಪಿಸಿ ಭಕ್ತಿಸತ್ರವನ್ನು ನಡೆಸುವದಕ್ಕಾರಂಭಿಸಲು ಅನೇಕರು ಶರಣುಬರುವದಕ್ಕೆ ಮೊದಲಾಯಿತು. ಶರಣುಬರುವವರಲ್ಲಿ—

ಶ್ಲೋ|| ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||
—(ಭ. ಗೀ)

ಅ|| ರೋಗಿ, ವಿಚಾರವನ್ನು ತಿಳಿಯಲಿಚ್ಛಿಸುವವನು, ಪ್ರಯೋಜನವನ್ನು ಬಯಸುವವನು, ಆತ್ಮಸ್ವರೂಪವನ್ನು ತಿಳಿದವನು. (ಹೀಗೆ ನಾಲ್ಕು ಬಗೆಯಾಗಿರುವರು)

ಇವರಲ್ಲಿ ಆತ್ಮಸ್ವರೂಪವನ್ನು ತಿಳಿಯಲಿಚ್ಛೆಯಿಂದ ಬರುವವರು ಬಹು ಕಡಿಮೆ. ಏಕೆಂದರೆ ಸಾಮಾನ್ಯರಿಗೆ ಅದು ರುಚಿಸುವದಿಲ್ಲವೆಂದು ಭಾಗವತರು ಹೇಳಿರುವದೇನೆಂದರೆ—

ಮುಖಾರಿ—ಝಂಪೆ

ಜ್ಞಾನಶೂನ್ಯರಿಗಾತ್ಮಬೋಧೆಯದು ಹಿತವಹುದೆ? | ಹೀನಲೌಕಿಕವಿಷಯಗಳಿಗೆ ಮೋಹಿಸುವ ||ಪ|| ಮಲವ ಭುಂಜಿಪ ಹಂದಿ ಮೃಷ್ಟಾನ್ನಕೆಳಸುವದೆ? | ಎಲುಬ ಕಡಿಯುವ ಕಿರುಬನಿಕ್ಷುವರಸುವದೇ? || ಕೊಳಪಳಿಕೆದಿಂ ಬೊಂಟೆ ಕದಲಿಯನಪೇಕ್ಷಿಪುದೆ? | ಹುಳಿತ ಹೆಣಕೊಲಿವ ನರಿ ಹಲಸ ಮೆಲ್ಲುವದೇ? ||೧|| ಕೆರವಗಿವ ಶುನಿ ಖಂಡಶರ್ಕರೆಯ ಬಯಸುವದೆ? | ಸುರೆಗುಡಿವ ಅಂತ್ಯಜನು ಸುಧೆಯ ಸೇವಿಪನೆ?|| ಕೆರೆಯೊಂಡ ಪೀರ್ವ ಭೇಕಂ ಕ್ಷೀರ ವೀಂಟುವದೆ? | ತರಗ ಮೇಯುವ ಮೇಕೆ ತುಪ್ಪಕಾಶಿಪುದೆ? ||೨|| ಕೀವ ಕುಡಿಯುವ ನೊಣವು ಕುಸುಮರಸಕೈದುವದೆ? | ಬೇವ ತಿಂಬುವ ಕಾಗೆ ಮಾವಿ

ಗೆರಗುವದೆ? ॥ ಈ ವಿಧದ ಸೀಚಪಿಷಯಾರ್ಥಿಗಳು ಗುರುಸಿದ್ಧ । ದೇವ ಸಿಮ್ಮ ಪ ದೇಶದತ್ತ ಮುಖರಹರೇ? —(ಕೈ. ಕ)

ಬಂಡವರಿಗೆಲ್ಲ ಭಕ್ತಿಪಂಥವನ್ನು ಹಿಡಿಸುತ್ತ ತಾಯಿಗೆ ಕಾಶೀಯಾತ್ರೆಯನ್ನು ಮಾಡಿಸುವದಕ್ಕೆ ಹೋಗಿ ಹಿಂದಿರುಗಿ ಅಯೋಧ್ಯೆಗೆ ಬಂದಿರುವಾಗ ತಾಯಿಗೆ ಮರಣಕಾಲ ಪ್ರಾಪ್ತವಾಗಲು—

ಸಾ॥ ಮಗಸಿಚ್ಛೆಯೊಳಗಯೋಧ್ಯೆಯುದಂದಾ । ಕೆಗೆ ಕಂಡುದು ಹೊಂಬಣ್ಣ॥ ವಿಂಗೆ ರಾಮನ ರೂಪಾಗಿರಲೆಲ್ಲವು । ಜಗದೊಳು ಕಳೆದುದು ಬನ್ನ ॥

ಇದೇ ಮಾತೃಋಣವನ್ನು ತೀರಿಸುವ ರೀತಿ—

ಸಾಂ॥ ಪುನ್ನಾಮನರಕವ ಕಳೆವರು ಪಲರುಂಟು ; । ಬೆನ್ನ ಹತ್ತಿದ ಹುಟ್ಟು ಸಾವ ॥ ಸನ್ನಿಯಿಂ ಕಳೆವ ನಾಮಸ್ಮರಣೆಯನೀಯೆ । ಧನ್ಯನವನು ತಾಯ ಕಾವ॥

ಹೀಗೆ ಯಾತ್ರೆಯನ್ನು ಮುಗಿಸಿಕೊಂಡು ಬರುವದರೊಳಗೇ—

ಕೀ॥ ಜಾಲನ ಪುರದೊಳಸಂತಸಾಗರ ನೇ । ಪಾಳದಿ ಹನುಮಾನೆಂಬು ವರು ॥ ಮೇಲುಗೈಯ ಶಿಷ್ಯತ್ವದಿ ಗುರುಗಳ । ಮೇಲತಿಭಕ್ತಿಯ ತೋರ್ದವರು ॥ ೧ ॥ ಬೆಳಧಡಿ ಬ್ರಹ್ಮಾನಂದರು ಪಟ್ಟಕೆ । ಸಲುವ ಶಿಷ್ಯರೆಂದೆಸಿಸುತ್ತ । ಬೆಳಗಿರು ವರು ಕನ್ನಡನಾಡನು ಗುರು । ತಿಲಕರಕೀರ್ತಿಯ ಬೆಳೆಸುತ್ತ ॥

ಟಿ॥ ಜಾಲನ ಎಂಬುವದು ಹೈದರಾಬಾದ್ ಸಂಸ್ಥಾನದಲ್ಲಿ ಒಂದೂರು. ಬೆಳಧಡಿ ಎಂಬು ವದು ಗದಗ ತಾಲ್ಲೂಕಿನಲ್ಲಿ ಒಂದೂರು.

ಈ ಶಿಷ್ಯರನ್ನು ನಾವು ಸಾಮಾನ್ಯಮನುಷ್ಯಕೋಟಿಯಲ್ಲಿ ಸೇರಿಸುವಹಾಗಿಲ್ಲ—

ಭಾ॥ ಪರುಷದಿಂದಲಿ ಲೋಹಗುಣ, ನೆರೆ । ಪರಮೆಯಿಂದಲಿ ಕೀಟಗುಣ, ಘನ । ತರದ ಸಂಜೀವನದ ಸೋಂಕಿಂ ಶವದ ಗುಣವಳಿದು ॥ ಮೆರವ ಪರಿ ಶ್ರೀ ಗುರುವೆ, ನಿಮ್ಮಯ । ಕರುಣವಡೆದನ ಮನುಜನೆಂಬರೆ? । ಪರಮಪಾವನಚರಿತ, ಪಾಲಿಪುದೆಮ್ಮನಟವೀಶ ॥ —(ಗು. ಭ. ಸಾ)

ಬ್ರಹ್ಮಚೈತನ್ಯರ ಬಳಿಗೆ ಅನೇಕರು ಬರುತ್ತಿದ್ದರಾದರೂ—

ಶ್ಲೋ॥ ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ॥ ಯತತಾ ಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ —(ಭ. ಗೀ)

ಅ॥ ಮನುಷ್ಯರಲ್ಲಿ ಸಾವಿರಕ್ಕೊಬ್ಬನು ಸಿದ್ಧಿಗಾಗಿ ಯತ್ನಿಸುವನು. ಯತ್ನಮಾಡಿದ ಸಿದ್ಧ ರಲ್ಲಿಯೂ ಯಾವನೋ ಒಬ್ಬನು ಆತ್ಮಸ್ವರೂಪದ ಯಥಾರ್ಥವನ್ನು ತಿಳಿಯುವನು.

ಎಂಬ ಗೀತೋಕ್ತಿಯಂತೆ ಕೆಲವರಾದರು. ಸಾಮಾನ್ಯರಿಗೆ ಉಪಯೋಗವಾದ ದೇವತಾ ಪ್ರತಿಷ್ಠೆ, ಭಜನೆ—ಮೊದಲಾದವುಗಳಲ್ಲದೆ ಆಗಾಗ ದಾಸಬೋಧ ಮೊದಲಾದ ಗ್ರಂಥಗಳ ನಿರೂಪಣಗಳ ಮೂಲಕ ಧರ್ಮೋಪದೇಶವು ಸಂತತವಾಗಿ ನಡೆಯುತ್ತಿತ್ತು. ಉದಾಹರಣಾರ್ಥವಾಗಿ ಅವರ ಕೆಲವು ಉಪದೇಶಗಳೇನೆಂದರೆ—

ಸಾಂ॥ ಕಾಲಕಾಲಕೆ ಸಂಧ್ಯೆ ಸಾಧಿಸಿ ಮನಸಿನ । ಧೂಳ ಕೊಡವಿ ಶುದ್ಧ ಮಾಡಿ ॥ ಮೇಲೆ ಕಾಮಕ್ರೋಧವ ಸುಟ್ಟ ಭಸ್ಮವ । ಫಾಲದಿ ಧಾರಣಮಾಡಿ॥ ೧ ॥

ಜೋಕೆಯೊಳಗೆ ಭಕ್ತಿ ಪಂಚಪಾತ್ರೆಯೊಳು ವಿ । ವೇಕದ ಸೌಟನು ಹಾಕಿ ॥ ಶ್ರೀಕಾಂತಧ್ಯಾನದಾಚಮನವ ಮಾಡಿರಿ । ಬೇಕುಬೇಡೆಂಬುದ ನೂಕಿ ॥ ೨ ॥ ಪ್ರಾಣಾಯಾಮವ ಸಾಧಿಸಿ ಸರ್ವ । ಪ್ರಾಣಿದಯಾಪರರಾಗಿ ॥ ಜಾಣತನದ ನ್ಯಾಸಾದಿಗಳಿಂದ ಸಂಧ್ಯೆಯ । ಹೀನಶತ್ರುಗಳನ್ನು ನೀಗಿ ॥ ೩ ॥ ವಾಸನೆತೃಷ್ಣೆಯ ಹಂಕಾರಗಳೆಂಬ । ದೋಷವಿಸರ್ಜನವ ಬಿಟ್ಟು ॥ ಶ್ರೀಶನುಪಾಸನೆಯನು ಮಾಡುವದೆ ಸಂಧ್ಯಾ । ಭ್ಯಾಸದೊಳಗೆ ತೋರ್ಪ ಗುಟ್ಟು ॥

ಅವರು ತಮ್ಮ ಶಿಷ್ಯಮಂಡಲಿಗೆ ಹೇಳಿರುವ ಎಚ್ಚರಿಕೆಯ ಮಾತುಗಳಲ್ಲಿ ಬಹಳ ನೆನಪಿನಲ್ಲಿಡಬೇಕಾದ ಕೆಲವೇನೆಂದರೆ—

ರ॥ ರವಿಯುದಯಕೆ ಮುನ್ನವೆ ತಾನೆದ್ದು । ಜವದಿ ಸ್ನಾನಜಪತಪದೊಳಗಿದ್ದು । ಪ್ರಾಣಾಯಾಮದಿ ಮನಸನು ತೊಳೆದು । ಮಾಣದೆ ಮಾನಸಪೂಜೆಯ ಬಲಿದು । ರಾಮಹೃದಯ ಹರಿಸಹಸ್ರನಾಮ । ನೇಮದ ಪಾರಾಯಣದೊಳು ಪ್ರೇಮ । ಗೀತಾಭಾಗವತಾದಿಯ ಪಠನ । ನೀತಿನಿಯಮದಿಂ ಜಗದೊಳಗಟನ । ವ್ಯವಹಾರದಿ ಬಲು ದಕ್ಷತೆ ತೋರೆ । ನಿರುಕಿಸೆ ಮನದೊಳುಪೇಕ್ಷೆಯು ಮೀರೆ । ಉಳಿಯಬೇಕು ಲೌಕಿಕವಹ ಘನತೆ । ಬೆಳೆಯಬೇಕೊಳಗೆ ಸಾಕ್ಷಿಯ ಸಮತೆ । ಭಕ್ತಿರಹಿತಜ್ಞಾನವ ಕೊಳಬೇಡ । ಯುಕ್ತಿವಿರುದ್ಧಕೆ ಹೂ ಎನಬೇಡ । ಸಿದ್ಧಿಚಮತ್ಕೃತಿಯಚ್ಚರಿಗಳಿಗೆ । ಮುಗ್ಧನಾಗಿ ಬೀಳದಿರಾ ಬಲೆಗೆ । ಗುರುಗಳ ಬರಿಸೋಗಿನ ಜನಗಳಿಗೆ । ಬೆರಗಾಗಲು ಹಾನಿಯೆ ಕೇಳ್ಕೊನೆಗೆ । ಸಗುಣೋಪಾಸನೆಯಿಲ್ಲದೆ ನಿನಗೆ । ಜಗದೊಳು ನಿರ್ಗುಣ ತೋರದು ಬಗೆಗೆ । ಅಖಂಡನಾಮಸ್ಮರಣೆಯ ಮಾಡು । ಅಖಂಡದನುಸಂಧಾನದಿ ಕೂಡು ॥

ಎಲ್ಲ ಉಪದೇಶಗಳನ್ನೂ ಅಡಗಿಸಿಕೊಂಡಿರುವಂಥ ಅವರ ಒಂದು ಉಪದೇಶವೇನೆಂದರೆ—

ಧನ್ಯಾಸಿ—ಆದಿತಾಳ

ರಾಮಮಂತ್ರವ ಜಪಿಸೋ । ಹೇ ಮನುಜ ॥ ಪ ॥ ಆ ಮಂತ್ರ ಈ ಮಂತ್ರ ನೆಚ್ಚಿ ಕೆಡಲು ಬೇಡ । ನೇಮದಿಂ ಭಜಿಸಲು ಕಾಮಿತವೀವ ಮಂತ್ರ ॥ ಅ. ಪ ॥ ಕುಲಹೀನನಾದರೂ ಕೂಗಿ ಜಪಿಸುವ ಮಂತ್ರ । ಸಲೆಬೀದಿಯೊಳು ಉಚ್ಚರಿಪ ಮಂತ್ರ ॥ ಹಲವು ಪಾಪಂಗಳ ಹತಗೈಯುವ ಮಂತ್ರ । ಸುಲಭದಿಂದಲಿ ಸ್ವರ್ಗ ಸೂರೆಗೊಳ್ಳುವ ಮಂತ್ರ ॥ ೧ ॥ ಸ್ನಾನಮೌನಂಗಳಿಗೆ ಸಾಧನವೀ ಮಂತ್ರ । ಮಾನಿಸಿಯರು ಮನದಿ ಧ್ಯಾನಿಪ ಮಂತ್ರ ॥ ಹೀನಗುಣಂಗಳನು ನೀಗಿ ಕಳೆಯುವ ಮಂತ್ರ । ಏನೆಂಬೆ ವಿಭೀಷಣಗೆ ಪಟ್ಟಗಟ್ಟಿದ ಮಂತ್ರ ॥ ೨ ॥ ಸಕಲವೇದಂಗಳಿಗೆ ಸಾರವೆನಿಪ ಮಂತ್ರ । ಮುಕುತಿಮಾರ್ಗಕೆ ಇದು ಮೂಲ ಮಂತ್ರ ॥ ಭಕುತಿಯ ರಸಕೆಲ್ಲ ಬಟ್ಟೆದೋರುವ ಮಂತ್ರ । ಸುಖನಿಧಿ ಪುರಂದರವಿಠಲನೆನಿಪ ಮಂತ್ರ ॥ —(ದಾ)

ಆ ನಾಮಗಳಲ್ಲೆಲ್ಲ ರಾಮನಾಮಕ್ಕೆ ಪ್ರಾಶಸ್ತ್ಯವೇಕೆಂದರೆ—

ಶ್ಲೋ॥ ಅಜರಾಮರತಾ ಯಸ್ಯ ಪುಂಸೋ ವೃತ್ತಿರ್ನಿರಂತರಮ್ । ಅಜರಾಮರತಾ ತಸ್ಯಾऽವಶ್ಯಂ ಪಾಣಿತಲೇ ಸ್ಥಿತಾ ॥ —(ಸು. ಲಾ)

ಅ॥ (ಅಜ+ರಾಮ+ರತಾ) ಜನ್ಮರಹಿತನಾದ ಶ್ರೀರಾಮಚಂದ್ರನಲ್ಲಿ ಆಸಕ್ತಿಯುಳ್ಳದ್ದಾಗಿ ಯಾವ ಮನುಷ್ಯನ ವೃತ್ತಿಯು ಯಾವಾಗಲೂ ಹರಿಯುತ್ತಿರುವದೊ ಅವನಿಗೆ ಅಗತ್ಯವಾಗಿ (ಅಜರಾ+ಅಮರತಾ) ಮುಪ್ಪಿಲ್ಲದಿರುವಿಕೆ ಮತ್ತು ಸಾವಿಲ್ಲದಿರುವಿಕೆ—ಇವು ಅಂಗಯ್ಯಲ್ಲಿರುತ್ತವೆ.

ಹೀಗೆ ಉಪದೇಶಮಾಡುತ್ತ ಅವರು ವ್ಯವಹಾರದಲ್ಲಿದ್ದ ಬಗೆ ಹೇಗೆಂದರೆ—

ಶ್ಲೋ॥ ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ । ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ —(ಭ. ಗೀ)

ಅ॥ ರಾಗದ್ವೇಷಗಳಿಲ್ಲದೆ ತನ್ನ ಹಿಡಿತದಲ್ಲಿರುವ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುತ್ತ, ಮನಸ್ಸಿನಮೇಲೆ ಅಧಿಕಾರವನ್ನು ನಡೆಸುವವನು ಪ್ರಸನ್ನತೆಯನ್ನು ಪಡೆಯುತ್ತಾನೆ.

ಎಂಬ ಗೀತೋಕ್ತಿಯಂತೆ ಮತ್ತು—

ಷ॥ ಹಸಿಯದೆ ಹುಸಿಯದೆ ಕುಸಿಯದೆ ನೆಸೆಯದೆ। ಹಸಗೆಡದಖಿಲರೊಳಗೆ ಕಾರುಣ್ಯಂ । ಮಸುಳಿಸದುದ್ರೇಕಿಸದೆ ವೃಥಾ ಧೃಸದಿ ವಿಷಯಂಗಳೊಳು ॥ ಪಸರಿಸಿ ಹರಿದಾಡದೆ ಲೌಕಿಕರಂ । ವಸನಾಗರದೆ ಮನಸ್ಸಂಸಾರದ । ಬೆಸುಗೆಯುಳಿದು ಸುಳಿಯುತ್ತಿಹಸಿಳಿಯೊಳಗೆಂದನು ದೇಶಿಕನು ॥ —(ಶಿ. ಯೋ. ಭೂ)

ಅಲ್ಲದೆ—

ಶ್ಲೋ॥ ಗೃಹಿತ್ವಾಪೀಂದ್ರಿಯೈರರ್ಥಾನ್ಯೋ ನ ದ್ವೇಷ್ಟಿ ನ ಕಾಂಕ್ಷತಿ ॥ ವಿಷ್ಣೋರ್ಮಾಯಾಮಿದಂ ಪಶ್ಯನ್ಸ ವೈ ಭಾಗವತೋತ್ತಮಃ ॥ —(ಸಂ. ಭಾಗ)

ಅ॥ ಇಂದ್ರಿಯಗಳಿಂದ ವಿಷಯಗಳನ್ನು ಗ್ರಹಿಸಿದರೂ ವಿಷಾದನಿಲ್ಲದೆ ಹರ್ಷವಿಲ್ಲದೆ ಇದೆಲ್ಲ ವಿಷ್ಣುವಿನ ಮಾಯೆಯೆಂದು ನೋಡುವವನು ಉತ್ತಮನಾದ ಭಗವದ್ಭಕ್ತನು.

ಈ ಉಕ್ತಿಗಳಂತೆ ಇದ್ದು ಅವರು ಇತರರಿಗೆ ಸಮಾಧಾನಕಾರಕರಾಗಿದ್ದುದೆಂತೆಂದರೆ—

ಶ್ಲೋ॥ ಗಂಗಾ ಪಾಪಂ, ಶಶೀ ತಾಪಂ, ದೈನ್ಯಂ ಕಲ್ಪತರುಸ್ತಥಾ । ಪಾಪಂ ತಾಪಂ ಚ ದೈನ್ಯಂ ಚ ಹಂತಿ ಸಾಧುಸಮಾಗಮಃ ॥ —(ಸು)

ಅ॥ ಗಂಗೆಯು ಪಾಪವನ್ನೂ ಚಂದ್ರನು ತಾಪವನ್ನೂ ಕಲ್ಪವೃಕ್ಷವು ದೈನ್ಯವನ್ನೂ ಹೋಗಲಾಡಿಸುವವು. ಸಾಧುಗಳ ಸಮಾಗಮವು ಆ ಮೂರನ್ನೂ ಹೋಗಲಾಡಿಸುವದು.

ಅವರಿಗೆ ಹೊರಗಣ ಆದಾಯವೇನೂ ಇರಲಿಲ್ಲವಾದರೂ—

ಕು॥ ಕೊಡಲೆಂದು ಕೈ ಎತ್ತೆ । ಹಿಡಿಯಲ್ಲಿ ನವನಿಧಿಯು । ಬಿಡದೆ ಭೋಗಿಸೆ ಕುರುಡುಕವಡೆ ಇಲ್ಲ; ॥ ನುಡಿಗೆ ಸಿಕ್ಕದು ನಿನ್ನ । ಬೆಡಗು ಗುರುದೇವ, ನಿ । ನ್ನಡಿಗೆ ಬೆರಗಾಗಿ ನಾನಭಿನಮಿಸುವೆಂ ॥ —(ಗು. ಸ್ತು. ಸು)

ಹೀಗೆ ಲಕ್ಷ್ಮಿಯು ಅವರ ಮುಂದೆ ತಾಂಡವವಾಡುತ್ತಿದ್ದರೂ ಅವರು ಅದಕ್ಕೆ ಅಲಿಪ್ತರಾಗಿ—

ಭಾ॥ ಅಂಬಲಿಯುಸಮ್ಮತಾನ್ನವನು, ಕನ । ಕಾಂಬರವ, ಕಂಬಳಿಯು, ಗೂನಿಯು, । ರಂಬೆಯುನು, ಗುಣವಂತರನು, ಗುಣಹೀನರಾದವರ ॥ ಸಂಭ್ರಮದಿ ಸಮದೃಷ್ಟಿಯಿಂದಲಿ । ಕಾಂಬ ಕರುಣಾಸಿಂಧು ನೀನಹು । ದಂಬಕ ತ್ರಯರೂಪ, ಪಾಲಿಪುದೆಮ್ಮನಟವೀಶ ॥ —(ಗು. ಭ. ಸಾ)

ಅವರ ವಿಚಾರವಾಗಿ ಪ್ರಚಾರದಲ್ಲಿರುವ ಮಹಿಮೆಗಳೇನೆಂದರೆ—

ರ॥ ನೋಡಿದ ಮಾತ್ರದಿ ಕಳ್ಳರ ಗುಂಪು । ಪಾಡನರಿದು ಶರಣೈದಿದ ಪೆಂಪು । ಮುಟ್ಟಿದ ಮಾತ್ರದೊಳೇ ಮೃತಜೀವ । ನೆಟ್ಟನೆ ಬದುಕಿದ ತಪಃಪ್ರಭಾವ । ನೋಡಿದ ಜನಗಳ ಕಣ್ಣಿಗೆ ಬರಿಕೈ । ಬೇಡುವರಿಗೆ ಸುರತರುವೆನ್ನೀಕೈ । ಮಣಿದ ಜನರ ಸಕಲೇಷ್ಟಾರ್ಥಗಳು । ತಣಿವಂತಾಗಿಹ ದೃಷ್ಟಾಂತಗಳು । ಇರುವದು ತಾನಾ ಗೋಂದಾವಲಿಯೊಳ್ । ಶರಣಗೆ ದರ್ಶನ ನೆನೆಸಿದ ಕಡೆಯೊಳ್ । ಒಡಕು ದೋಣಿ; ನದಿ ತುಂಬಿದ ಗಂಗೆ; । ಕಡೆಹಾಯ್ದುದುದಚ್ಚರಿ ನೋಳ್ಪಂಗೆ । ಬರಿಗಣ್ಗಾಕಣ್ಬುದು ಮನುಜಾಕಾರ । ಶರಣೆನೆ ಕಾಣ್ಬುದು ವಾಯುಕುಮಾರ । ತಾಯ ಸೇವೆಗೆಸ್ವಂತ ವೈಕುಂಠಕೆ । ಸ್ತ್ರೀಯುಳೊಬ್ಬಳನು ಕಳುಹಿದ ಜೋಕೆ । ಪರರ ರೋಗಗಳ ತಾವನುಭವಿಸಿ । ಮೆರೆದುದು ಸುಖದೊಳು ಶರಣರನಿರಿಸಿ । ಒಂದು ಪಾವನನ್ನವ ನೀನಿಂತು । ಬಂದ ಸಹಸ್ರಕೆ ಬಡಿಸಿದುದಂತು । ಬರಿಯ ವೇಷಕಿದು ಮದ್ದೆಂದಿಡಲು । ಉರಿಗೆಂಡವ ನುಂಗಿದೆ ಕಂಗೆಡಲು । ಇಲ್ಲಿ ಬಿಟ್ಟು ಹೊರಡುವೆನೆಂದೆನಲು । ಕಲ್ಲ ಮೂರ್ತಿಗಳ ಕಣ್ಣೀರ್ವೊಗನಲು ॥

ಕೇವಲ ಭೌತಿಕದೃಷ್ಟಿಯುವರು ಈ ಮಹತ್ತ್ವಗಳಿಗೆ ತಲೆದೂಗದಿದ್ದರೂ—

ರ॥ ಬಹುಕಡೆ ರಾಮಜಪಗಳಾಗಿಹುದು । ಬಹುಕಡೆ ರಾಮಸ್ಥಾಪನೆಯಿರುವುದು । ಬಹುಕಡೆ ಭಜನೆಯು ನಡೆಯುತ್ತಿಹುದು । ಬಹು ಜನರನು ದಾರಿಗೆ ತಂದಿಹುದು । ಬಹುಜನರ ವಿವಾಹವ ಮಾಡಿಹುದು । ಬಹುಕುಟುಂಬ ರಕ್ಷಣೆಗೈದಿಹುದು । ಬಹುಗೋವುಗಳನು ಕಾಪಾಡಿಹುದು । ಬಹು ಜನರನು ಯಾತ್ರೆಯ ಗೈಸಿಹುದು । ಬಹುಜನರಕ್ಷಣೆಯನು ವಹಿಸಿದುದು । ಬಹುಜನ ಭಕ್ತರನುದ್ಧರಿಸಿದುದು ॥

ಈ ಮಹತ್ತ್ವಗಳನ್ನು ಯಾರೂ ಇಲ್ಲವೆನ್ನುವದಕ್ಕಿಲ್ಲ. ಹೀಗೆಲ್ಲ ಆಗುವದೆಂತೆಂದು ಸಂಶಯ ಪಡಬೇಕಾದ್ದಿಲ್ಲ.—

ಉ॥ ಮ್ಮಾರಿಯ ಕೈಯಿಂದ ನೀರ ತರಿಸುವರು; ಮಸಣಿಯ ಕೈಯಿಂದ ಕಸವ ಬಳಿಸುವರು; ಮೃತ್ಯುವಿನ ಕೈಯಿಂದ ಬತ್ತವ ಕುಟ್ಟಿಸುವರು; ಜವನರ ಕೈಯಿಂದ ಜಂಗುಲಿಯ ಕಾಯಿಸುವರು; ಪುರಂದರವಿಠಲನ ದಾಸರು ಸರಿಬಂದ ಹಾಗಿಹರು ಭೂಮಿಯ ಮೇಲೆ. —(ದಾ)

ಅ॥ ಜಂಗುಲಿ–ಅರಣ್ಯ.

ಇವೆಲ್ಲ ತಪಸ್ಸಾಮರ್ಥ್ಯದ ಲಕ್ಷಣಗಳಾದರೂ ಮುಮುಕ್ಷುಗಳಿಗೆ ಬೇಕಾದ ಜ್ಞಾನಿಗಳ ಲಕ್ಷಣವೇನೆಂದರೆ—

ಶ್ಲೋ॥ ಸವಿತರ್ಯಪಿ ಶೀತರುಚೌ । ಚಂದ್ರೇ ತೀಕ್ಷ್ಣೇಽಪ್ಯಧೋ ವಹತ್ಯಗ್ನೌ ॥
ಮಾಯಿಕಮಿದಮಿತಿ ಜಾನನ್ । ಜೀವನ್ಮುಕ್ತೋ ನ ವಿಸ್ಮಯೀಭವತಿ ॥

—(ಆ. ವಿ. ವಿ)

ಅ॥ ಸೂರ್ಯನು ತಣ್ಣಗಾದರೂ ಚಂದ್ರನು ಬಿಸಿಯಾದರೂ ಅಗ್ನಿಯು ಕೆಳಮುಖವಾಗಿ ಉರಿದರೂ ಇದನ್ನೆಲ್ಲ ಮಾಯಿಕವೆಂದು ತಿಳಿದು ಜೀವನ್ಮುಕ್ತನು ಬೆರಗಾಗುವದಿಲ್ಲ.

ಇಂಥ ಲಕ್ಷಣಗಳಿಗೆಲ್ಲ ತೌರುಮನೆಯಾಗಿದ್ದ ಅವರನ್ನು ಶಿಷ್ಯಕೋಟಿ ಹೊಗಳುವದೇನೆಂದರೆ—

ಚೂ॥ ಜಯ ಸಾಧುವರ್ಯ ಸದ್ಗುರುಮಹಾರಾಜ, ಶರಣಜನಕಲ್ಪಭೂಜ, ಧರಣಿಗಾದರ್ಶ ಸನ್ನಿಂದ್ರಿಯಗಳೋಜ, ಪರಿಪೂರ್ಣತೇಜ । ಸಕಲಾಸ್ತಿಕಪ್ರವರನಿಕರದಧಿನಾಯಕಾ, ಶರಣಜನಸರ್ವೇಷ್ಟದಾಯಕ, ರಾಮನಾಮಸಹಸ್ರಗಾಯಕ, ರೂಪಿನಲಿ ನೋಡೆ ಸುಮಸಾಯಕಾ, ಜಗವೆಲ್ಲ ನಿನಗೆ ಮಾಯಿಕ । ಗೋದಾವಲೀಕ್ಷೇತ್ರವಾಸ, ಎಂದಿಗೂ ನಿನಗಿಲ್ಲ ದೋಷ, ನಿನ್ನ ನಂಬಿದ ಜನರ ಪಾಪನಾಶ, ವಿರಕ್ತವೇಷ, ಸತ್ಯಭಾಷ, ಕೃಪಾವೇಶ । ಭಕ್ತಿಭಾಗ್ಯದ ಸೂರೆ ಜನಕೆ, ವಿರಕ್ತಿ ಮೇರೆಯ ಮೀರೆ ಮನಕೆ, ವಿಷಯಾಸಕ್ತಿ ಹಿಮ್ಮೆಟ್ಟುವದು ಮನಕೆ, ಧರೆಯೊಳೆಣೆ ಇಲ್ಲ ನಿಮ್ಮಯ ಸತ್ತ್ವಗುಣಕೆ, ಉದ್ಧರಿಸುವದು ಕ್ಷಣಕೆ । ನಿನಗೆ ಶರಣೆನಲು ಹೋಗುವದು ಬಂಧ । ಮನಕೆ ತೋರುವದು ಪರಮಾತುಮನ ಚಂದ । ನೀನೆನಗೆ ಮಾಧವನು, ನೀನೆನಗುಮಾಧವನು, ನೀನೆ ಸರಸಿರುಹಭವನು । ನರಲೋಕದಜ್ಞತೆಯ ದೂರಮಾಡುವನೆ, ನತಜನಾಪತ್ಕುಲವ ಗಾರುಗೆಡಿಸುವನೆ, ನಲಿನೀದಲಾಂಬುವೆನೆ ಬೇರೆಯುಳಿಯುವನೆ, ಮಮತೆಯೆಂಬುವ ಗಂಟಬಿಚ್ಚಿ ಕಳೆಯುವನೆ, ಮಧುರತರವಾದಪಾಂಗದಿ ನೋಡುವವನೆ, ಮಂದಹಾಸದಿಶಶಿಯ ಮಂದಗೈಯುವನೆ, ಮಕರಂದರಸದಂತೆ ಮಾತನಾಡುವನೆ, ಮಂದಾರಶಾಖೆಯುಹ ಭುಜದಿ ಶೋಭಿಪನೆ, ಮಂಜುಪ್ರವಾಲಪದತಲವಿರಾಜಿತನೆ, ಮರವೆಯೆಂಬುವ ಪರೆಯ ಕೊರೆಯುವವನೆ, ಅರಿವೆಂಬ ದೃಷ್ಟಿಯನು ಬರಿಸುವವನೆ । ನಿನ್ನ ಕಾಲ್ತೊಳೆದ ನೀರೇ ಸರ್ವತೀರ್ಥ, ನಿನ್ನ ಮರೆಯುತ ಗೈವ ಕರ್ಮವೆಲ್ಲ ಅನರ್ಥ, ನಿನ್ನನುಗ್ರಹವಿಲ್ಲದರ್ಥವೆಲ್ಲವಪಾರ್ಥ, ಸರ್ವಸಮರ್ಥ । ನೀ ನಿಂತ ನೆಲವೇ ಕ್ಷೇತ್ರ, ನಿನ್ನ ಸಂಬಂಧವಿಲ್ಲದ ನೆಲವು ಭೂತಮಾತ್ರ, ಮನ್ನಣೆಗೆ ಪಾತ್ರವಾಗಿ, ಹುದು ನಿನ್ನಗಾತ್ರ, ನೀನು ಕೇಳೀಗ ನಾ ಗೈವ ಸ್ತೋತ್ರ, ನಾ ನಿನ್ನ ಛಾತ್ರ । ನಿನ್ನ ಮಾತೇ ವೇದ ಸತ್ಯಬೋಧ, ನಿನ್ನ ಮಹಿಮೆಯ ನೋಡೆ ಜಗದೊಳಗಗಾಧ, ನಿನ್ನನುಗ್ರಹದಿಂದ ಮುಗಿಯುವದು ವಾದ, ನಿನ್ನ ಕರುಣದೊಳಾಗುವದು ಸರ್ವಮೋದ, ನಿನ್ನಿಂದಲಳಿಯುವದು ಸರ್ವಭೇದ । ನೀನೆನ್ನ ಗುರುವರೇಣ್ಯ, **ಶ್ರೀಬ್ರಹ್ಮಚೈತನ್ಯ**, ನೀನು ಸರ್ವರಿಗೆ ಮಾನ್ಯ, ಎನ್ನ ಮೇಲಿರಲಿ ಕಾರುಣ್ಯ, ವದಾನ್ಯ, ಚಿದ್ವಿಲಾಸಗಣ್ಯ, ನಿನ್ನನುಗ್ರಹದಿಂದ ನಾನು ಧನ್ಯ ಧನ್ಯ ॥

ಹೀಗೆ ಹೊಗಳಿಸಿಕೊಂಡ ಸದ್ಗುರುಮಹಾರಾಜರು ತಾವು ನೈಮಿಷಾರಣ್ಯವನ್ನು ಬಿಟ್ಟು ಬಂದು ಬಹು ದಿವಸಗಳಾದವೆಂದು ಹೇಳಿ ತಮ್ಮ ಪ್ರಯಾಣವನ್ನು ಮುಂದಾಗಿಯೇ ಎಲ್ಲರಿಗೂ ತಿಳಿಸಿ—

ಕೀ|| ತಿಳಿದು ಪ್ರಮಾದೀಚದ ಮಾರ್ಗಶಿರದೊ । ಳೊಲಿದು ಬಹುಳ ದಶಮಿಯ ದಿನವ || ಸಲೆ ಬ್ರಾಹ್ಮೀಸಮಯದಿ ಪದ್ಮಾಸನ । ದೊಳು ತಳೆದರು ಯೋಗದಿ ಮನವ ||

ಇನ್ನೂ ಅದನ್ನು ವಿವರಿಸಿ ಹೇಳಬೇಕಾದರೆ—

ಕಂ|| ಮನವಿರೆ ಪುರ್ಬಿನ ಕೊನೆಯೊಳ್, । ಮನದೊಳಗಿರೆ ವಾಯು, ಕರಣ ತತಿ ವಾಯುವಿನೊಳ್ || ಅಣಗಿರೆ, ಪದ್ಮಾಸನದೊಳ್ । ತನುವಿರೆ, ಯೋಗೀಂದ್ರನಾತ್ಮಚಿಂತೆಯೊಳಿರ್ದಂ || —(ಯ. ೮)

ಹೀಗೆ ದಿನವೆಲ್ಲ ಶರೀರವು ಒಂದೇ ಸಮನಾಗಿದ್ದು ಮರುದಿನ ದೇಹದಲ್ಲಿ ಸ್ವಲ್ಪ ವಿಕಾರವು ಕಂಡಮೇಲೆ—

ಸಾಂ|| ಯೋಗಸಿದ್ಧಿಯು ನಡೆ, ಜ್ಞಾನಸಿದ್ಧಿಯು ನುಡಿ । ಗಾಗ ಭಕ್ತಿಯು ಬೆಸೆದವರು || ಯೋಗಸಿದ್ಧಿಯೊಳು ದೇಹವನುಳಿದೈದಿದ । ರೀಗೆಂದು ನಿಶ್ಚಯಿಸಿದರು ||

ಆಗ ಜನರೆಲ್ಲರೂ ದುಃಖಿಸಿದ್ದು—

ಮುಖಾರಿ—ಆದಿತಾಳ

ಏನಮಾಡುವೆವೀಗ? । ಹೀನದೈವರು ನಾವು || ಪ || ಕಾಣಿಸು ದಾರಿ ಮುಂದೆ; । ದೀನರಾದೆವೊ ತಂದೆ; || ಮಾನಿತ ಗುರುವೆಂದೇ । ಕಾಣದೆ ಹೋದ ಮೇಲೆ || ಅ. ಪ || ಯಾರೆಮ್ಮ ಕಾಯುವರು? ಯಾರೆಮ್ಮ ಕೇಳುವರು? । ಯಾರೆಮ್ಮ ಕಷ್ಟದಿಂದ ಪಾರುಮಾಡಿಸುವರು? || ಯಾರೆಮಗಿನ್ನು ಮೇಲೆ ಭೂರಿಬುದ್ಧಿಯ ಹೇಳಿ । ದಾರಿಗೈದಿಸಿ ಸುಖವ ಹಾರಯಿಸುವರಯ್ಯೋ । || ೧ || ಇನ್ನೇತಕೆಮ್ಮ ಸುಖ? ಇನ್ನು ನಾವ್ಯಾನಾಮುಖ! । ಇನ್ನಾರು ಭೂಮಿಯಲ್ಲಿ ಮಾನ್ಯರೊಳಗಧಿಕ? || ಇನ್ನೆಂತು ಬಾಳುವೆವು? ಇನ್ನಾರ ಕೇಳುವೆವು? । ಇನ್ನಾರ ಬಲದಿಂದ ಬನ್ನವ ನೀಗುವೆವು? || ೨ || ಹೋದನೆಮ್ಮಯ ತಂದೆ; ಹೋದಳೆಮ್ಮಯ ತಾಯಿ; । ಹೋದರು ಬಂಧುಗಳು; ಹೋದರೆಲ್ಲರು ಈಗ; || ಹೋದೆ ನೀ ಗುರುವರ್ಯ, ಈ ದಿನವಿಂತಾಯ್ತು; । ಹೋದವೆಲ್ಲಾ ಭಾಗ್ಯ; ಹೋದವರೇ ನಾವು || ೩ ||

ಹೀಗೆ ದುಃಖಿಸುತ್ತಿರಲು ಅವರು ಮಾಡಿದ್ದ ಗೋಶಾಲೆಯಲ್ಲಿಯೇ ಅವರ ದಹನವಿಧಿಯಾಯಿತು. ಈಗ ಅಲ್ಲಿಯೇ ಅವರ ಸಮಾಧಿ ನಿರ್ಮಾಣವಾಗಿದೆ. ಅಲ್ಲಿಗಾದರೂ ಹೋಗಿ ನಾವು ಹೊರಬೇಕಾದ ಹರಕೆಯೇನೆಂದರೆ—

ಕು|| ನಿನ್ನ ಹಾಸಿಕೆಯಾಗಿ | ನಿನ್ನ ಹೊದ್ದಿಕೆಯಾಗಿ | ನಿನ್ನ ತಲೆಗಿಂಬಾಗಿ ಮಂಚವಾಗಿ || ನಿನ್ನ ಭೋಗ್ಯಪದಾರ್ಥವನ್ನು ಮಾಡೆನ್ನ ಸಂ | ಪನ್ನ ಗುರುದೇವ, ನಿನ್ನಡಿಗೆರಗುವೆಂ || ೧ || ನಿನ್ನ ಪೀಠವೆ ಆಗಿ | ನಿನ್ನ ಪಾದುಕೆಯಾಗಿ | ನಿನ್ನ ಕಾಲ್ಕೆಳಗೆ ಮೃದುಧೂಲಿಯಾಗಿ || ನಿನ್ನ ಭೋಗ್ಯಪದಾರ್ಥ | ವನ್ನು ಮಾಡೆನ್ನ ಸಂ | ಪನ್ನ ಗುರುದೇವ, ನಿನ್ನಡಿಗೆರಗುವೆಂ || ೨ || ನಿನ್ನ ವಸ್ತ್ರಗಳಾಗಿ | ನಿನ್ನ ಭೂಷಣವಾಗಿ | ನಿನ್ನ ಬಾಯ್ಸೋರ್ವ ಪಕ್ವಾನ್ನವಾಗಿ || ನಿನ್ನ ಭೋಗ್ಯಪದಾರ್ಥ | ವನ್ನು ಮಾಡೆನ್ನ ಸಂ | ಪನ್ನಗುರುದೇವ, ನಿನ್ನಡಿಗೆರಗುವೆಂ || —(ಗು. ಸ್ತು. ಸು)

ಶ್ರೀ ಬ್ರಹ್ಮಚೈತನ್ಯರ ಈ ಗೌರವವನ್ನು ನೋಡಿಯೇ ಭಾಗವತೋತ್ತಮರು ಕೀರ್ತನಾರಂಭದಲ್ಲಿ "ಧರೆಯೊಳಗಿವನೆ ಸದ್ಗುರುಮಹಾರಾಜ" ಎಂದು ಉಪದೇಶಮಾಡಿರುವರು.

## ಮಂಗಲ

### ಸೌರಾಷ್ಟ್ರ—ಏಕತಾಳ

ಗುರುರಾಜ, ಬ್ರಹ್ಮರೂಪ, ಮಹಾರಾಜ, ಮಂಗಲಂ || ಪ || ಚರಣಾಂಬುವಿಂದ ಸರ್ವ | ವರತೀರ್ಥಫಲವ ಕೊಡುವ || ೧ || ನುಡಿಯೊಂದರಿಂದ ಜನರ | ಜಡತೆಯ ಕಳೆಯುತಿರುವ || ೨ || ಕಾಮಗಳೆಲ್ಲವನು | ಹೋಮವ ಮಾಡುತಿರುವ || ೩ || ಪರಮಾತ್ಮಚಿಂತನೆಯ | ಸ್ಥಿರವಾಗುವಂತೆ ಗೈವ || ೪ || ಭಕ್ತಿವಿರಕ್ತಿಯಿರುವ | ಭಕ್ತೇಡ್ಯ ಚಿತ್ಸ್ವಭಾವ || ೫ || —(ಭ. ೧೯.)

**ಜಯ ಜಯ ರಘುವೀರ ಸಮರ್ಥ**

—✠*✠—